CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩೦, ೨೦೦೪ (ಆಶ್ವಯುಜ ೮, ಶಕ ವರ್ಷ ೧೯೨೬) | ಸಂಚಿಕೆ ೪೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಶಿಕ್ಷಣ ಸಚಿವಾಲಯ**

**ಸರ್ಕಾರಿ ಆದೇಶ ಸಂಖ್ಯೆ:ಇ ಡಿ 88 ಡಿಜಿಡಿ 2002(1), ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

**ಅಧಿಕೃತ ಜ್ಞಾಪನ**

**(ಮೆಮೋರ್‍ಯಾಂಡಂ)**

ದಿನಾಂಕ:20.12.2003 ರ ಸರ್ಕಾರಿ ಆದೇಶ ಸಂಖ್ಯೆ ಇ ಡಿ 88 ಡಿಜಿಡಿ 2002 ರಲ್ಲಿ ಶ್ರೀ ಬಿ.ರಾಮರಾವ್, ನಿವೃತ್ತ ಪ್ರಾಂಶುಪಾಲರು, ಡಯಟ್, ಬಳ್ಳಾರಿ, ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214ರ ಅಡಿಯಲ್ಲಿ ಇ ಲಾಖಾ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿ ನೀಡಿದ ಹಿನ್ನೆಲೆಯಲ್ಲಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11ಎ ರಡಿಯಲ್ಲಿ ವಿಚಾರಣೆ ನಡೆಸಲು ಉದ್ದೇಶಿಸಿದೆ.

2. ಈ ವಿಚಾರಣೆಗೆ ಸಂಬಂಧಿಸಿದ ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಲ್ಲಿ, ದೋಷಾರೋಪಣೆಯ ವಿವರಗಳನ್ನು ಅನುಬಂಧ-2 ರಲ್ಲೂ ಹಾಗೂ ವಿಚಾರಣೆಗೆ ಸಂಬಂಧಿಸಿದ ದಾಖಲೆ:ದಸ್ತಾವೇಜು ಹಾಗೂ ಸಾಕ್ಷಿಗಳನ್ನು ಅನುಬಂಧ-3 ಮತ್ತು ಅನುಬಂಧ-4 ರಲ್ಲಿ ನಮೂದಿಸಿದೆ.

3. ಶ್ರೀ ಬಿ.ರಾಮರಾವ್, ಅವರಿಗೆ ಅಧಿಕೃತ ಜ್ಞಾಪನಾ ತಲುಪಿದ 15 ದಿನಗಳೊಳಗೆ ಲಿಖಿತ ಮೂಲಕ ತಮ್ಮ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸುವಂತೆಯೂ ಹಾಗೂ ತಾವೇ ಸ್ವತ: ಅಹವಾಲನ್ನು ಹೇಳಿಕೊಳ್ಳುವುದಿದ್ದರೆ ಆ ಕುರಿತು ಅವರ ಅಪೇಕ್ಷೆಯಿದ್ದರೆ ತಿಳಿಸಲು ಸೂಚನೆ ನೀಡಲಾಗಿದೆ.

4. ಯಾವ ಆಪಾದನೆಗಳನ್ನು ಒಪ್ಪಿಕೊಳ್ಳುವುದಿಲ್ಲವೋ ಅವುಗಳ ಬಗ್ಗೆ ವಿಚಾರಣೆ ನಡೆಸಲಾಗುವುದೆಂದು ತಿಳಿಸುತ್ತ ಆಪಾದನೆ ಗಳನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳಬೇಕೆಂದು ಅಥವಾ ನಿರಾಕರಿಸಬೇಕೆಂದು ತಿಳಿಸಲಾಗಿದೆ.

5. ಶ್ರೀ ಬಿ.ರಾಮರಾವ್, ಅವರಿಗೆ ಮತ್ತೆ ತಿಳಿಸುವುದೇನೆಂದರೆ ಈ ಮೇಲೆ ಕಾಣಿಸಿದ ಅವಧಿಯೊಳಗೆ ಲಿಖಿತ ಹೇಳಿಕೆ ಸಲ್ಲಿಸದಿದ್ದಲ್ಲಿ ಅಥವಾ ಖುದ್ದಾಗಿ ಹಾಜರಾಗದಿದ್ದಲ್ಲಿ ಅಥವಾ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ಯಲ್ಲಿನ ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ. ಹಾಗೂ ಅಧಿಕೃತ ಜ್ಞಾಪನ ತಲುಪಿದುದಕ್ಕೆ ಸ್ವೀಕೃತಿ ಕಳುಹಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

## ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ ಇವರ ಮೇಲಿನ ದುರ್ನಡತೆ ಮತ್ತು ಹಣ ದುರುಪಯೋಗದ ಆಪಾದನೆಗಳಿಗೆ ಆರೋಪಣಾ ಪಟ್ಟಿ

### ಅನುಬಂಧ-1

**ಆರೋಪ:-1**

ಶ್ರೀ ಬಿ. ರಾಮರಾವ್, ಆದ ನೀವು ಈ ಹಿಂದೆ ಬಳ್ಳಾರಿ ಡಯಟ್‌ದಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಡಯಟ್ ಹಂತದಲ್ಲಿ ನಡೆಯುತ್ತಿದ್ದ ತರಬೇತಿಗಳಿಗೆ ಅಗತ್ಯವಿರುವ ಸಾಮಗ್ರಿಗಳನ್ನು ಖರೀದಿಸಿರುವಲ್ಲಿ ಖರೀದಿನಿಯಮಗಳನ್ನು ಉಲ್ಲಂಘಿಸಿ ಮುಕ್ತ ಮಾರುಕಟ್ಟೆಯಿಂದ ಸಾಮಗ್ರಿಗಳನ್ನು ಖರೀದಿಸಿದ್ದು ಈ ಮೂಲಕ ನಕಲಿ ರಸೀದಿಗಳನ್ನು ನಿರ್ವಹಿಸಿ, ರೂ. 1,46,527 ಗಳ ಹಣಕಾಸಿನ ಅವ್ಯವಹಾರವೆಸಗಿರುತ್ತೀರಿ ಹಾಗೂ ದುರುಪಯೋಗಪಡಿಸಿಕೊಂಡಿರುತ್ತೀರಿ. ಸರ್ಕಾರದ ಖರೀದಿ ಆದೇಶಗಳು ಮತ್ತು ಇಲಾಖೆಯ ಮಾರ್ಗದರ್ಶಿ ಸುತ್ತೋಲೆಗಳನ್ನು ಪರಾಮರ್ಶಿಸದೆ ಬೇಜವಾಬ್ದಾರಿತನದಿಂದ ಸರ್ಕಾರದ ನಿಯಮಾವಳಿಗಳ ವಿರುದ್ಧ ಕಾರ್ಯನಿರ್ವಹಿಸಿ ಕರ್ತವ್ಯಲೋಪವೆಸಗಿ ಅಪ್ರಮಾಣಿಕತೆ, ಕರ್ತವ್ಯ ನಿರ್ಲಕ್ಷತನದಿಂದ ನಡೆದುಕೊಂಡಿರುತ್ತೀರಿ.

ಈ ನಿಮ್ಮ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3ಕ್ಕೆ ವ್ಯತಿರಿಕ್ತವಾಗಿದೆ.

**ಆರೋಪ:-2**

ಶ್ರೀ ಬಿ. ರಾಮರಾವ್, ಆದ ನೀವು ಈ ಹಿಂದೆ ಬಳ್ಳಾರಿ ಡಯಟ್‌ದಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ನಡೆಸಿದ ಹಲವಾರು ತರಬೇತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದ ಸಂಪನ್ಮೂಲ ವ್ಯಕ್ತಿಗಳು ಮತ್ತು ತರಬೇತಿಯಲ್ಲಿ ಕೆಲಸ ನಿರ್ವಹಿಸಿದ ಡಿ ದರ್ಜೆ ನೌಕರರಿಗೆ ಸಂಭಾವನೆಯನ್ನು ನಿಯಮಗಳ ಪ್ರಕಾರ ಪಾವತಿಸದೆ, ಸಂಪನ್ಮೂಲ ವ್ಯಕ್ತಿಗಳಿಗೆ ನಿಯಮಬಾಹಿರವಾಗಿ ಹೆಚ್ಚುವರಿ ಸಂಭಾವನೆ ನೀಡಿರುವಂತೆ ಬಟವಾಡೆಗಳನ್ನು ನಿರ್ವಹಿಸಿರುತ್ತೀರಿ. ಈ ಮೂಲಕ ಸರ್ಕಾರಕ್ಕೆ ಒಟ್ಟು ರೂ. 21,911/- ಗಳನ್ನು ಹೆಚ್ಚಿನ ಆರ್ಥಿಕ ನಷ್ಟವನ್ನುಂಟು ಮಾಡಿರುತ್ತೀರಿ ಮತ್ತು ಈ ಮೊತ್ತದಲ್ಲಿ ರೂ.6,385/- ಗಳನ್ನು ನಿಯಮಾನುಸಾರ ಡಿ ದರ್ಜೆ ನೌಕರರಿಗೆ ಸಂಭಾವನೆಯಾಗಿ ನೀಡದೆ ಕರ್ತವ್ಯ ಲೋಪವೆಸಗಿ, ಸದರಿ ಡಿ ದರ್ಜೆ ನೌಕರರ ಸಂಭಾವನೆ ಹಣ ರೂ. 6,385/- ದುರುಪಯೋಗಪಡಿಸಿಕೊಂಡು, ಭ್ರಷ್ಟಾಚಾರವೆಸಗಿರುತ್ತೀರಿ. ಇದರಿಂದ ನೀವು ಸರ್ಕಾರದ ಆದೇಶಗಳನ್ನು ನೀತಿ ನಿಯಮಗಳನ್ನು ಮತ್ತು ಸುತ್ತೋಲೆಗಳನ್ನು ನಿರ್ಲಕ್ಷಿಸಿ ಮನಸೋ ಇಚ್ಛೆಯಂತೆ ಕಾರ್ಯನಿರ್ವಹಿಸಿ ಕರ್ತವ್ಯಲೋಪವೆಸಗಿರುತ್ತೀರಿ.

ಈ ನಿಮ್ಮ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3ಕ್ಕೆ ವ್ಯತಿರಿಕ್ತವಾಗಿದೆ.

**ಆರೋಪ:-3**

ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಡಯಟ್ ಆದ ನೀವು ಈ ಹಿಂದೆ ಬಳ್ಳಾರಿ ಡಯಟ್‌ದಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸಂಸ್ಥೆಯಲ್ಲಿನ ಸರ್ಕಾರೇತರ ನಿಧಿಯಿಂದ ರೂ. 1,65,854/-ಗಳ ಹಣವನ್ನು ನಿಯಮಬಾಹಿರವಾಗಿ ಮುಂಗಡವಾಗಿ ಪಡೆದಿರುತ್ತೀರಿ. ಮತ್ತು ಸರ್ಕಾರ ನಿಧಿಗೆ ಸಂಬಂಧಿಸಿದ ಯಾವುದೇ ನಿಯಮಗಳನ್ನು ಪಾಲಿಸದೆ ಹಣಕಾಸಿನ ಅವ್ಯವಹಾರ ಮಾಡಿ ಮತ್ತು ಕಛೇರಿಯ ಕಾರ್ಯಪದ್ಧತಿಯನ್ನು ಅನುಸರಿಸದೆ, ನೇರವಾಗಿ ಸ್ವತಃ ನಿರ್ವಹಿಸಿ ಸಂಸ್ಥೆಯ ಲೆಕ್ಕ ಶಾಖೆಗೆ ಕೇವಲ ರಸೀದಿಗಳನ್ನು ಮಾತ್ರ ನಗದು ಪುಸ್ತಕಗಳಲ್ಲಿ ನೊಂದಣಿ ಮಾಡಲು ಸೂಚಿಸಿರುತ್ತೀರಿ. ಇದಲ್ಲದೆ ನೀವು ವಿದ್ಯಾರ್ಥಿ ವೇತನ ಹಣ ರೂ. 225/-ಗಳಿಗೆ ವಿತರಣೆಯನ್ನು ಎ.ಸಿ. ಬಿಲ್ಲಿನ ಮೂಲಕ ಡ್ರಾ ಮಾಡಲಾದ 2,24,200/- ರೂಗಳಿಗೆ ನಿಯಮಾನುಸಾರ ವೆಚ್ಚಗಳನ್ನು ಭರಿಸಿ ದಾಖಲೆಗಳನ್ನು ನಿರ್ವಹಿಸಿರುವುದಿಲ್ಲ. ನಗದು ವಹಿ ಹಾಗೂ ಸಂಸ್ಥೆಯ ಬ್ಯಾಂಕ್ ಪಾಸ್‌ಗಳಿಗೂ ರೂ. 6,538/-ಗಳು ವ್ಯತ್ಯಾಸವಿದೆ. ಸಂಸ್ಥೆಯ ವಾಹನದ ರಿಪೇರಿ ವೆಚ್ಚ ರೂ. 5,569/- ಗಳು ಹಾಗೂ ಮರು ತುಂಬದೆ ಇರುವ ದೂರವಾಣಿ ವೆಚ್ಚ ರೂ. 1,264/- ಗಳ ಹಣಕಾಸಿನ ಅವ್ಯವಹಾರವೆಸಗಿ ಸರ್ಕಾರದ ಹಣ ದುರುಪಯೋಗಪಡಿಸಿಕೊಂಡು ಸರ್ಕಾರಕೆ ಹೆಚ್ಚಿನ ಆರ್ಥಿಕ ನಷ್ಟವನ್ನುಂಟುಮಾಡಿರುತ್ತೀರಿ. ಮತ್ತು ಇದರಲ್ಲಿ ನೀವು ಕಾನೂನು ಬಾಹಿರವಾಗಿ ಹಾಗೂ ಜಾರಿಯಲ್ಲಿರುವ ಎಲ್ಲಾ ನಿಯಮ ಹಾಗೂ ಆದೇಶಗಳನ್ನು ನಿರ್ಲಕ್ಷಿಸಿ ಮನಸೋಇಚ್ಛೆಯಂತೆ ಕಾರ್ಯನಿರ್ವಹಿಸಿ ನೇರವಾಗಿ ಭ್ರಷ್ಟಾಚಾರವೆಸಗಿ ಹಣ ದುರುಪಯೋಗಪಡಿಸಿಕೊಂಡಿರುತ್ತೀರಿ.

ಈ ನಿಮ್ಮ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3ಕ್ಕೆ ವ್ಯತಿರಿಕ್ತವಾಗಿದೆ.

### ಅನುಬಂಧ-2

## ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ ಇವರ ಮೇಲಿನ ದುರ್ನಡತೆ ಮತ್ತು ಹಣ ದುರುಪಯೋಗದ ಆಪಾದನೆಗಳಿಗೆ ವಿವರಣೆ ಪಟ್ಟಿ

**ಆರೋಪ:-1 ಕ್ಕೆ ವಿವರಣೆ:**

ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ ಇವರು ಈ ಹಿಂದೆ ಬಳ್ಳಾರಿ ಡಯಟ್‌ನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಡಯಟ್‌ನಿಂದ ಹಮ್ಮಿಕೊಳ್ಳಲಾಗಿದ್ದ ಹಲರಾರು ತರಬೇತಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ತರಬೇತಿಗೆ ಅಗತ್ಯವಿರುವ ಅನೇಕ ಲೇಖನ ಸಾಮಗ್ರಿಗಳನ್ನು ಖರೀದಿಮಾಡಿರುವಲ್ಲಿ ಮತ್ತು ಶಿಬಿರಾರ್ಥಿಗಳಿಗೆ ಲಘು ಉಪಹಾರ, ಕಾಫಿ ಹಾಗೂ ಚಹಾ ಒದಗಿಸುವಲ್ಲಿ ಚಾಲ್ತಿಯಲ್ಲಿದ್ದ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿ ಅವ್ಯವಹಾರವನ್ನೆಸಗಿ ಸರ್ಕಾರವನ್ನು ವಂಚಿಸಿರುತ್ತಾರೆ- ಈ ಮೂಲಕ ರೂ. 1,46,527/- ಗಳನ್ನು ದುರುಪಯೋಗ ಪಡಿಸಿಕೊಂಡು ಅಕ್ರಮಗಳನ್ನೆಸಗಿರುತ್ತಾರೆ.

ಲೇಖನ ಸಾಮಗ್ರಿಗಳನ್ನು ಖರೀದಿಸುವ ಪೂರ್ವದಲ್ಲಿ ಖರೀದಿ ನಿಯಮಗಳನ್ನು ಪಾಲಿಸಿರುವುದಿಲ್ಲ ಮತ್ತು ಲೇಖನ ಸಾಮಗ್ರಿಗಳನ್ನು ತರಬೇತಿಯ ಪೂರ್ವದಲ್ಲಿ ಖರೀದಿಸದೆ ದುರುದ್ದೇಶ ಪೂರ್ವಕವಾಗಿ ತರಬೇತಿಗಳ ಅಂತಿಮ ದಿನದಂದು ಖರೀದಿಸಿ ವೋಚರ್‌ಗಳನ್ನು ನಿರ್ವಹಿಸಿರುತ್ತಾರೆ. ಈ ರೀತಿ ಖರೀದಿಸಲಾದ ಲೇಖನ ಸಾಮಗ್ರಿಗಳನ್ನು ದಾಸ್ತಾನಿಗೆ ತೆಗೆದುಕೊಂಡಿರುವುದಿಲ್ಲ. ಇದರಿಂದಾಗಿ ಸದರಿ ಲೇಖನ

ಸಾಮಗ್ರಿಗಳು ಶಿಬಿರಾರ್ಥಿಗಳಿಗೆ ವಿತರಣೆಯಾಗದಿರುವುದು ವ್ಯಕ್ತವಾಗಿದೆ. ಲೇಖನ ಸಾಮಗ್ರಿಗಳನ್ನು ಸರ್ಕಾರದ ಅಧಿಕೃತ ಸಂಸ್ಥೆಗಳಿಂದ ಖರೀದಿಸದೆ ಮುಕ್ತ ಮಾರುಕಟ್ಟೆಯಲ್ಲಿ ಖರೀದಿಗಳನ್ನು ಮಾಡಿದ್ದಾರೆ. ಖರೀದಿನಿಯಮಗಳಂತೆ ದರಪಟ್ಟಿಗಳನ್ನು ಕರೆದು ತುಲನಾತ್ಮಕ ಪಟ್ಟಿಗಳನ್ನು ನಿರ್ವಹಿಸದೆ ಮುಕ್ತ ಮಾರುಕಟ್ಟೆಯಿಂದ ಖರೀದಿಸುವುದಾಗಿ ಅಂಗಡಿಗಳ ರಸೀದಿಗಳನ್ನು ನಿರ್ವಹಿಸಿರುತ್ತಾರೆ. ಅತಿ ಕಡಿಮೆ ದರವನ್ನು ನಮೂದಿಸಿರುವ ಸಂಸ್ಥೆಗಳಿಗೆ ಖರೀದಿ ಆದೇಶಗಳನ್ನು ನೀಡದೆ ಹೆಚ್ಚಿನ ಎಲ್ಲಾ ರಸೀದಿಗಳನ್ನು ಅನುಕೂಲಕರವಾದ ಅಂಗಡಿಗಳಿಂದ ಖರೀದಿಸಿರುವುದು ಸದರಿ ಅಂಗಡಿಗಳ ರಸೀದಿಗಳಂತೆ ಕಂಡು ಬಂದಿದೆ. ಹಾಗೂ ನಕಲಿ ರಸೀದಿಗಳನ್ನು ಸೃಷ್ಟಿಸಿರುವುದಾಗಿಯೂ ವ್ಯಕ್ತವಾಗಿದೆ. ತನ್ಮೂಲಕ ಸರ್ಕಾರದ ಕಾರ್ಯಕ್ರಮಗಳ/ಯೋಜನೆಗಳ ಅನುಷ್ಠಾನದ ಮೂಲ ಉದ್ದೇಶವನ್ನೇ ಕಡೆಗಣಿಸಿರುತ್ತಾರೆ. ಹಾಗೂ ಕಾಫಿ ಹಾಗೂ ಚಹಾ ವಿತರಣೆಯಲ್ಲಿಯೂ ಸರ್ಕಾರದ ನಿಯಮಾವಳಿಗಳ ವಿರುದ್ಧ ಕಾರ್ಯನಿರ್ವಹಿಸಿರುತ್ತಾರೆ. ಅಂಗೀಕೃತ ಹೊಟೇಲಿನಿಂದ ದರ ಪಟ್ಟಿಯನ್ನು ಕರೆದು ನಿಯಮಾನುಸಾರ ಕ್ರಮ ವಹಿಸದೆ ಕೈ ರಸೀದಿಗಳ ಹೋಟೆಲ್ ಬಿಲ್ಲನ್ನು ಸಲ್ಲಿಸಿರುತ್ತಾರೆ ಹಾಗೂ ಇದರಿಂದ ನಕಲಿ ರಸೀದಿಗಳನ್ನು ಸೃಷ್ಟಿಸಿರುವುದಾಗಿಯೂ ವ್ಯಕ್ತವಾಗಿದೆ. ಈ ರೀತಿ ತರಬೇತಿಗಳಿಗಾಗಿ ನಿಯಮಬಾಹಿರವಾಗಿ ಈ ಕೆಳಗಿನ ಹಣವನ್ನು ಹೆಚ್ಚುವರಿ ವೆಚ್ಚವಾಗಿ ಭರಿಸಿರುತ್ತಾರೆ.

| | | |
|---|---|---|
| 1. | ಸಿಬ್ಬಂದಿ ವರ್ಗದವರಿಗೆ ವಿಭಾಗ ಮಟ್ಟದಲ್ಲಿ ಜಂಡರ ಕಾರ್ಯಗಾರ ದಿನಾಂಕ: 11.11.98 ರಿಂದ 13.11.98 ವರೆಗೆ; ಡಯಟ್, ಬಳ್ಳಾರಿ. | 1725-00 |
| 2. | ಆರ್.ಸಿ.ಸಿ.ಪಿ. ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 3.8.98 ರಿಂದ 7.8.98 | 1870-00 |
| 3. | ಪರಿಸರ ತರಬೇತಿ ಡಯಟ್ ದಿನಾಂಕ: 9.11.98 ರಿಂದ 10.11.98 | 1000-00 |
| 4. | ಅಂಗವಿಕಲ ಮಕ್ಕಳ ಸಮನ್ವಯ ಕಾರ್ಯಾಗಾರ ಡಯಟ್ ದಿನಾಂಕ: 9.11.98 ರಿಂದ 10.11.98 | 1080-00 |
| 5. | ದೈಹಿಕ ಶಿಕ್ಷಣ ತರಬೇತಿ ಡಯಟ ಬಳ್ಳಾರಿ ದಿನಾಂಕ: 16.11.98 ರಿಂದ 18.11.98 | 0762-00 |
| 6. | ಗಣಿತ ಪುನಶ್ಚೇತನ ಕಾರ್ಯಾಗಾರ ಸಿರುಗುಪ್ಪ ದಿನಾಂಕ: 16.11.98 ರಿಂದ 20.11.98 ರವರೆಗೆ | 1050-00 |
| 7. | ಎಸ್.ಯು.ಪಿ. ಡಬ್ಲ್ಯೂ ಕಾರ್ಯಗಾರ ಡಯಟ್ ಬಳ್ಳಾರಿ ದಿನಾಂಕ: 18.11.98 ರಿಂದ 20.11.98 | 0950-00 |
| 8. | ಜಂಡರ ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 14.12.98 ರಿಂದ 17.12.98 | 1200-00 |
| 9. | ಅಲ್ಪಾವಧಿ ಅಂಗವಿಕಲ ಸಮನ್ವಯ ಕಾರ್ಯಗಾರ ಹೊಸಪೇಟೆ ದಿನಾಂಕ: 31.12.98 | 1000-00 |
| 10. | ಸಾಮಾಜಿಕ ಅಭ್ಯಾಸ-ಡಯಟ್ ದಿನಾಂಕ: 11.01.99 ರಿಂದ 13.1.99 | 1300-00 |
| 11. | ದೈಹಿಕ ಶಿಕ್ಷಣ - ಡಯಟ್ ದಿನಾಂಕ: 28.01.99 ರಿಂದ 30.11.99 | 1200-00 |
| 12. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 28.1.99 ರಿಂದ 31.1.99 | 1400-00 |
| 13. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 28.1.99 ರಿಂದ 31.1.99 | 0900-00 |
| 14. | ಪರಿಸರ ತರಬೇತಿ ಡಯಟ್ ದಿನಾಂಕ: 28.1.99 ರಿಂದ 29.1.99 | 0825-00 |
| 15. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 22.2.99 ರಿಂದ 24.2.99 | 1400-00 |
| 16. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ಬಳ್ಳಾರಿ ದಿನಾಂಕ: 22.2.99 ರಿಂದ 24.2.99 | 1500-00 |
| 17. | ದೈಹಿಕ ಶಿಕ್ಷಣ ಡಯಟ್ ದಿನಾಂಕ: 25.2.99 ರಿಂದ 27.2.99 | 1150-00 |
| 18. | ಕನ್ನಡ ಭಾಷಾ ತರಬೇತಿ ಹಡಗಲಿ ದಿನಾಂಕ: 25.8.99 ರಿಂದ 27.8.99 | 1200-00 |
| 19. | ಪರಿಸರ ತರಬೇತಿ ಹೊಸಪೇಟೆ 27.8.99 ರಿಂದ 29.8.99 | 1935-00 |
| 20. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ದಿನಾಂಕ: 19.8.99 ರಿಂದ 20.8.99 | 1989-00 |
| 21. | ಸಾಫ್ಟ್ ತರಬೇತಿ-ಹೆಚ್.ಬಿ. ಹಳ್ಳಿ, ದಿನಾಂಕ: 14.12.98 ರಿಂದ 20.12.98 | 1500-00 |
| 22. | ಸಾಫ್ಟ್ ತರಬೇತಿ-ಹೂವಿನಹಡಗಲಿ ದಿನಾಂಕ: 8.1.99 ರಿಂದ 14.1.99 | 1500-00 |
| 23. | ಸಾಫ್ಟ್ ತರಬೇತಿ ಸಿರುಗುಪ್ಪ ದಿನಾಂಕ: 18.1.99 ರಿಂದ 24.1.99 | 1500+1218 |
| 24. | ಸಾಫ್ಟ್ ತರಬೇತಿ ಕೂಡ್ಲಗಿ ದಿನಾಂಕ: 8.2.99 ರಿಂದ 14.2.99 | 1500-00 |
| 25. | ಸಾಫ್ಟ್ ತರಬೇತಿ ಹೊಸಪೇಟೆ ದಿನಾಂಕ: 22.2.99 ರಿಂದ 28.2.99 | 1008-00 |
| 26. | ಸಾಫ್ಟ್ ತರಬೇತಿ ಹೊಸಪೇಟೆ ದಿನಾಂಕ: 22.2.99 ರಿಂದ 28.2.99 | 1500-00 |
| 27. | ಸಾಫ್ಟ್ ತರಬೇತಿ ಸಂಡೂರು ದಿನಾಂಕ: 15.2.99 ರಿಂದ 21.2.99 | 1176-00 |
| 28. | ಸಾಫ್ಟ್ ತರಬೇತಿ ಸಂಡೂರು ದಿನಾಂಕ: 15.2.99 ರಿಂದ 21.2.99 | 1500-00 |
| 29. | ಸಾಫ್ಟ್ ತರಬೇತಿ ಡಯಟ್ ದಿನಾಂಕ: 1.3.99 ರಿಂದ 7.3.99 | 0840-00 |
| 30. | ಸಾಫ್ಟ್ ತರಬೇತಿ ಡಯಟ್ ದಿನಾಂಕ: 1.3.99 ರಿಂದ 7.3.99 | 1500-00 |
| 31. | ವಿಭಾಗೀಯ ಮಟ್ಟದ ಶಿಕ್ಷಣ ತಂತ್ರಜ್ಞಾನ ಡಯಟ್ 8-3-99 ರಿಂದ 10-3-99 | 0700-00 |
| 32. | ವಿಭಾಗೀಯ ಮಟ್ಟದ ಶಿಕ್ಷಣ ತಂತ್ರಜ್ಞಾನ ಡಯಟ್ 8-3-99 ರಿಂದ 10-3-99 | 0840-00 |
| 33. | ವಿಭಾಗೀಯ ಮಟ್ಟದ ಶಿಕ್ಷಣ ತಂತ್ರಜ್ಞಾನ ಡಯಟ್ 8-3-99 ರಿಂದ 10-3-99 | 5940-00 |
| 34. | ಉಪಗ್ರಹ ಆಧಾರಿತ ದೂರಸಂಪರ್ಕ ಬಳ್ಳಾರಿ ದಿನಾಂಕ: 24.5.99 ರಿಂದ 26.5.99 | 2250-00 |
| 35. | ಆಂಗ್ಲ ಭಾಷಾ ತರಬೇತಿ ಸಿರುಗುಪ್ಪ ದಿನಾಂಕ: 9.8.99 ರಿಂದ 11.8.99 | 1125-00 |

| | | |
|---|---|---|
| 36. | ಕನ್ನಡ ಭಾಷಾ ತರಬೇತಿ ಕೂಡ್ಲಿಗಿ ದಿನಾಂಕ: 15.9.99 ರಿಂದ 19.9.99 | 1250-00 |
| 37. | ಕನ್ನಡ ಭಾಷಾ ತರಬೇತಿ ಕೂಡ್ಲಿಗಿ ದಿನಾಂಕ: 15.9.99 ರಿಂದ 19.9.99 | 0690-00 |
| 38. | ಪರಿಸರ ತರಬೇತಿ ಡಯಟ್ ದಿನಾಂಕ: 10.9.99 ರಿಂದ 11.9.99 | 1175-00 |
| 39. | ಸಾಮಾಜಿಕ ವಿಜ್ಞಾನ ತರಬೇತಿ ಹೆಚ್.ಬಿ.ಹಳ್ಳಿ, ದಿನಾಂಕ: 20.9.99 ರಿಂದ 22.9.99 | 1050-00 |
| 40. | ವಿಜ್ಞಾನ ತರಬೇತಿ ಹೊಸಪೇಟೆ ದಿನಾಂಕ: 21.9.99 ರಿಂದ 25.9.99 | 1250-00 |
| 41. | ಸಾಮಾನ್ಯ ವಿಜ್ಞಾನ ತರಬೇತಿ ಹಡಗಲಿ ದಿನಾಂಕ: 4.10.99 ರಿಂದ 8.10.99 | 1100-00 |
| 42. | ವಿಜ್ಞಾನ ತರಬೇತಿ ಹೂವಿನಹಡಗಲಿ ದಿನಾಂಕ: 27.12.99 ರಿಂದ 31.12.99 | 1100-00 |
| 43. | ಕನ್ನಡ ಭಾಷಾ ತರಬೇತಿ 21.2.2000 ರಿಂದ 25.2.2000 | 2035-00 |
| 44. | ಹಿಂದಿ ಶಿಕ್ಷಕ ತರಬೇತಿ ಕೂಡ್ಲಿಗಿ 27.9.99 ರಿಂದ 29.9.99 | 1250-00 |
| 45. | ಸಮಾಜ ವಿಜ್ಞಾನ ತರಬೇತಿ ಹಗರಿಬೊಮ್ಮನಹಳ್ಳಿ 27-12-99 ರಿಂದ 29-12-99 | 975-00 |
| 46. | ಸಾಫ್ಟ್ ತರಬೇತಿ ಹೂವಿನ ಹಡಗಲಿ 10.1.2000 ರಿಂದ 16.1.2000 | 1075-00 |
| 47. | ಗಣಿತ ಸಂಡೂರು 24.2.2000 ರಿಂದ 28.2.2000 | 2365-00 |
| 48. | ವಿಜ್ಞಾನ ತರಬೇತಿ ಸಂಡೂರು 18.1.2000 ರಿಂದ 21.1.2000 | 1175-00 |
| 49. | ಗ್ರಾಮ ಶಿಕ್ಷಣ ತರಬೇತಿ ಬಳ್ಳಾರಿ 17.1.2000 ರಿಂದ 19.1.2000 | 4940-00 |
| 50. | ಗ್ರಾಮ ಶಿಕ್ಷಣ ತರಬೇತಿ ಬಳ್ಳಾರಿ 17.1.2000 ರಿಂದ 19.1.2000 | 0440-00 |
| 51. | ಗ್ರಾಮ ಶಿಕ್ಷಣ ತರಬೇತಿ ಬಳ್ಳಾರಿ 17.1.2000 ರಿಂದ 19.1.2000 | 1200-00 |
| 52. | ಗಣಿತ ತರಬೇತಿ ಹೊಸಪೇಟೆ 7.2.2000 ರಿಂದ 11.2.2000 | 1250-00 |
| 53. | ಹಿಂದಿ ಭಾಷಾ ತರಬೇತಿ ಕೂಡ್ಲಿಗಿ 27.1.2000 ರಿಂದ 29.1.2000 | 775-00 |
| 54. | ಹಿಂದಿ ಭಾಷಾ ತರಬೇತಿ ಹಗರಿ ಬೊಮ್ಮನಹಳ್ಳಿ 27.1.2000 ರಿಂದ 29.1.2000 | 1849-00 |
| 55. | ಹಿಂದಿ ಭಾಷಾ ತರಬೇತಿ ಹೂವಿನಹಡಗಲಿ 28.1.2000 ರಿಂದ 30.1.2000 | 2279-00 |
| 56. | ವಿಜ್ಞಾನ ತರಬೇತಿ ಬಳ್ಳಾರಿ 1.2.2000 ರಿಂದ 5.2.2000 | 1978-00 |
| 57. | ವಿಜ್ಞಾನ ತರಬೇತಿ ಕೂಡ್ಲಿಗಿ 7.2.2000 ರಿಂದ 11.2.2000 | 1125-00 |
| 58. | ಗಣಿತ ತರಬೇತಿ ಬಳ್ಳಾರಿ 7.2.2000 ರಿಂದ 11.2.2000 | 1025-00 |
| 59. | ಗಣಿತ ತರಬೇತಿ ಹಗರಿಬೊಮ್ಮನಹಳ್ಳಿ 21.2.2000 ರಿಂದ 25.2.2000 | 2530-00 |
| 60. | ಗಣಿತ ತರಬೇತಿ ಸಿರಗುಪ್ಪ 20.2.2000 ರಿಂದ 3.3.2000 | 2695-00 |
| 61. | ಪರಿಸರ ತರಬೇತಿ ಬಳ್ಳಾರಿ 28.2.2000 ರಿಂದ 29.2.2000 | 0888-00 |
| 62. | ಗಣಿತ ತರಬೇತಿ ಹೂವಿನಹಡಗಲಿ 21.2.2000 ರಿಂದ 25.2.2000 | 2640-00 |
| 63. | ವಿಜ್ಞಾನ ತರಬೇತಿ ಸಿರಗುಪ್ಪ 10.1.2000 ರಿಂದ 14.1.2000 | 2805-00 |
| 64. | ಗಣಿತ ತರಬೇತಿ ಕೂಡ್ಲಿಗಿ 21.2.2000 ರಿಂದ 25.2.2000 | 1250-00 |
| 65. | ದೈಹಿಕ ಶಿಕ್ಷಣ ತರಬೇತಿ ಡಯಟ್ 19.9.99 ರಿಂದ 18.9.99 | 0575-00 |
| 66. | ಹಿಂದಿ ಭಾಷಾ ತರಬೇತಿ ಡಯಟ್ 9.2.2000 ರಿಂದ 11.2.2000 | 0700-00 |
| 67. | ವಿಜ್ಞಾನ ತರಬೇತಿ ಹೆಚ್.ಬಿ.ಹಳ್ಳಿ 19.6.2000 ರಿಂದ 23.6.2000 | 1250-00 |
| 68. | ವಿಜ್ಞಾನ ತರಬೇತಿ ಹೆಚ್.ಬಿ.ಹಳ್ಳಿ 19.6.2000 ರಿಂದ 23.6.2000 | 1250-00 |
| 69. | ಎಸ್.ಯು.ಪಿ.ಡಬ್ಲ್ಯೂ ಕಾರ್ಯಾಗಾರ ಡಯಟ್ ದಿನಾಂಕ: 19.8.99 ರಿಂದ 20.6.2000 | 1125-00 |
| 70. | ಸಮಾಜ ವಿಜ್ಞಾನ ತರಬೇತಿ ಡಯಟ್ 26.6.2000 ರಿಂದ 30.6.2000 | 1110-00 |
| 71. | ಸಮನ್ವಯ ಶಿಕ್ಷಣ ಡಯಟ್ 21.2.2000 ರಿಂದ 22.2.2000 | 475-00 |
| 72. | ಸಾಫ್ಟ್ ಶಿಕ್ಷಣ ಹೊಸಪೇಟೆ 15.9.99 ರಿಂದ 21.9.99 | 2960-00 |
| 73. | ಸಾಫ್ಟ್ ಶಿಕ್ಷಣ ಸಂಡೂರು 15.9.99 ರಿಂದ 25.9.99 | 2603+600 |
| 74. | ಸಾಫ್ಟ್ ಶಿಕ್ಷಣ ಹೂವಿನಹಡಗಲಿ 16.9.99 ರಿಂದ 22.9.99 | 3610-00 |
| 75. | ಸಾಫ್ಟ್ ಶಿಕ್ಷಣ ಹೂವಿನಹಡಗಲಿ 16.9.99 ರಿಂದ 22.9.99 | 2960-00 |
| 76. | ಸಾಫ್ಟ್ ಶಿಕ್ಷಣ ಹೊಸಪೇಟೆ 17.1.99 ರಿಂದ 23.1.99 | 2545-00 |
| 77. | ಸಾಫ್ಟ್ ಶಿಕ್ಷಣ ಸಿರಗುಪ್ಪ 15.1.99 ರಿಂದ 21.9.99 | 2750-00 |
| 78. | ಸಾಫ್ಟ್ ಶಿಕ್ಷಣ ಹೊಸಪೇಟೆ 17.1.99 ರಿಂದ 23.1.99 | 0780-00 |
| 79. | ಸಾಫ್ಟ್ ಶಿಕ್ಷಣ ಹೊಸಪೇಟೆ 17.1.99 ರಿಂದ 23.1.99 | 2915-00 |
| 80. | ಸಾಫ್ಟ್ ಶಿಕ್ಷಣ ಹೂವಿನಹಡಗಲಿ 10.1.99 ರಿಂದ 16.1.99 | 3562-00 |

| | | |
|---|---|---|
| 81. | ಸಾಫ್ಟ್ ತರಬೇತಿ ಕೂಡ್ಲಿಗಿ 19.1.2000 ರಿಂದ 25.1.2000 | 0700-00 |
| 82. | ಸಾಫ್ಟ್ ತರಬೇತಿ ಕೂಡ್ಲಿಗಿ 19.1.2000 ರಿಂದ 25.1.2000 | 2775-00 |
| 83. | ಸಾಫ್ಟ್ ತರಬೇತಿ ಹೊಸಪೇಟೆ ದಿನಾಂಕ: 24.2.2000 ರಿಂದ 2.3.2000 | 860-00 |
| 84. | ಸಾಫ್ಟ್ ತರಬೇತಿ ಹೊಸಪೇಟೆ ದಿನಾಂಕ: 24.2.2000 ರಿಂದ 2.3.2000 | 3750-00 |
| 85. | ಸಾಫ್ಟ್ ತರಬೇತಿ ಹೂವಿನಹಡಗಲಿ ದಿನಾಂಕ: 26.2.2000 ರಿಂದ 3.3.2000 | 0820-00 |
| 86. | ಸಾಫ್ಟ್ ತರಬೇತಿ ಹೂವಿನಹಡಗಲಿ ದಿನಾಂಕ: 26.2.2000 ರಿಂದ 3.3.2000 | 2000-00 |
| 87. | ಸಾಫ್ಟ್ ತರಬೇತಿ ಹೂವಿನಹಡಗಲಿ ದಿನಾಂಕ: 26.2.2000 ರಿಂದ 3.3.2000 | 1750-00 |
| 88. | ಪ್ರಾ.ಶಾ.ಶಿಕ್ಷಕರಿಗೆ ಗಣಿತ ತರಬೇತಿ ಕಾರ್ಯಾಗಾರ, ಹೊಸಪೇಟೆ, ದಿನಾಂಕ: 16.1.02 ರಿಂದ 20.1.02 | 3550-00 |
| 89. | ಕೇಳಿ ಕಲಿ ತರಬೇತಿ, ಡಯಟ್, ಬಳ್ಳಾರಿ, ದಿ: 23.3.02. | 560-00 |
| 90. | ಚಿಣ್ಣರ ಅಂಗಳ ತರಬೇತಿ, ಡಯಟ್, ಬಳ್ಳಾರಿ ದಿ: 14.3.02 ರಿಂದ 19.3.02 | 800-00 |
| | **ಒಟ್ಟು ರೂ.** | **1,46,527-00** |

ಈ ಮೇಲಿನ ಎಲ್ಲಾ ತರಬೇತಿಗಳ ಹಣವನ್ನು ಶ್ರೀ ಬಿ. ರಾಮರಾವ್ ಇವರು ನಿಯಮಗಳನ್ನು ಉಲ್ಲಂಘಿಸಿ ಮತ್ತು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಗಂಭೀರ ಆರ್ಥಿಕ ದುರ್ನಡತೆಯನ್ನು ಎಸಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ನಿಯಮ 3 ನ್ನು ಉಲ್ಲಂಘಿಸಿರುತ್ತಾರೆ. ಹಾಗೂ ಇಂತಹ ನಡವಳಿಕೆಗಳನ್ನು ಎಸಗುವ ಮೂಲಕ ಶಿಸ್ತಿನ ಕ್ರಮಕ್ಕೆ ತಮ್ಮನ್ನು ಅರ್ಹರನ್ನಾಗಿಸಿಕೊಂಡಿರುತ್ತಾರೆ.

**ಆರೋಪ-2 ಕ್ಕೆ ವಿವರಣೆ:**

ಶ್ರೀ ಬಿ. ರಾಮರಾವ್ ನಿವೃತ್ತ ಪ್ರಾಚಾರ್ಯರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ಬಳ್ಳಾರಿ ಇವರು ಈ ಹಿಂದೆ ಬಳ್ಳಾರಿ ಡಯಟ್‌ನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಡಯಟ್‌ನಿಂದ ಹಮ್ಮಿಕ್ಕೊಳ್ಳಲಾಗಿದ್ದ ಹಲವಾರು ತರಬೇತಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ತರಬೇತಿಯಲ್ಲಿ ಪಾಲ್ಗೊಂಡಿದ್ದ ಸಂಪನ್ಮೂಲ ವ್ಯಕ್ತಿಗಳಿಗೆ ನಿಯಮಬಾಹಿರವಾಗಿ ರೂ. 15526/-ಗಳನ್ನು ಹೆಚ್ಚುವರಿಯಾಗಿ ಪಾವತಿಸಿರುತ್ತಾರೆ. ಹಾಗೂ ತರಬೇತಿಗೆ ಹಾಜರಾಗದ ಸಂಪನ್ಮೂಲ ವ್ಯಕ್ತಿಗಳಿಗೂ ಸಂಭಾವನೆಯನ್ನು ವಿತರಿಸಿರುವಂತೆ ಬಟವಾಡೆ ವೋಚರ್‌ಗಳನ್ನು ದುರುದ್ದೇಶದಿಂದ ನಿರ್ವಹಿಸಿ ಈ ಹಣವನ್ನು ದುರ್ಬಳಕೆ ಮಾಡಿರುತ್ತಾರೆ. ಈ ರೀತಿ ಅಕ್ರಮಗಳನ್ನು ಎಸಗಿ ಸರ್ಕಾರದ ಬೊಕ್ಕಸಕ್ಕೆ ಹೆಚ್ಚಿನ ಆರ್ಥಿಕ ಹೊರೆಯನ್ನು ಹೇರಿರುತ್ತಾರೆ.

| | | |
|---|---|---|
| 1. | ಪರಿಸರ ತರಬೇತಿ ದಿನಾಂಕ: 9.11.98 ರಿಂದ 10.11.98 | 200-00 |
| 2. | ಸಾಫ್ಟ್ ತರಬೇತಿ ಕಾರ್ಯಾಗಾರ ಹಗರಿಬೊಮ್ಮನಹಳ್ಳಿ ದಿನಾಂಕ:14.12.98 ರಿಂದ 20.12.98 | 245-00 |
| 3. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನಹಡಗಲಿ ದಿನಾಂಕ:8.1.99 ರಿಂದ 14.1.99 | 210-00 |
| 4. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನಹಡಗಲಿ ದಿನಾಂಕ:8.1.99 ರಿಂದ 14.1.99 | 210-00 |
| 5. | ಸಾಫ್ಟ್ ತರಬೇತಿ ಕಾರ್ಯಾಗಾರ ಸಿರುಗುಪ್ಪ ದಿನಾಂಕ:18.1.99 ರಿಂದ 24.1.99 | 280-00 |
| 6. | ಸಾಫ್ಟ್ ತರಬೇತಿ ಕಾರ್ಯಾಗಾರ ಕೂಡ್ಲಿಗಿ ದಿನಾಂಕ:8.2.99 ರಿಂದ 14.2.99 | 1,885-00 |
| 7. | ಸಾಫ್ಟ್ ತರಬೇತಿ ಕಾರ್ಯಾಗಾರ ಕೂಡ್ಲಿಗಿ ದಿನಾಂಕ:8.2.99 ರಿಂದ 14.2.99 | 280-00 |
| 8. | ಸಾಫ್ಟ್ ತರಬೇತಿ ಕಾರ್ಯಾಗಾರ ಹೊಸಪೇಟೆ ದಿನಾಂಕ:22.2.99 ರಿಂದ 28.2.99 | 280-00 |
| 9. | ಸಾಫ್ಟ್ ತರಬೇತಿ ಕಾರ್ಯಾಗಾರ ಸಂಡೂರು ದಿನಾಂಕ:15.2.99 ರಿಂದ 21.2.99 | 480-00 |
| 10. | ಸಾಫ್ಟ್ ತರಬೇತಿ ಕಾರ್ಯಾಗಾರ ಸಂಡೂರು ದಿನಾಂಕ:15.2.99 ರಿಂದ 21.2.99 | 245-00 |
| 11. | ಸಾಫ್ಟ್ ತರಬೇತಿ ಕಾರ್ಯಗಾರ ಡಯಟ್ ಬಳ್ಳಾರಿ ದಿನಾಂಕ:1.3.99 ರಿಂದ 7.3.99 | 980-00 |
| 12. | ಸಾಫ್ಟ್ ತರಬೇತಿ ಕಾರ್ಯಗಾರ ಡಯಟ್ ಬಳ್ಳಾರಿ ದಿನಾಂಕ:1.3.99 ರಿಂದ 7.3.99 | 140-00 |
| 13. | ಶಿಕ್ಷಣ ತಂತ್ರಜ್ಞಾನ ಡಯಟ್ ಬಳ್ಳಾರಿ ದಿನಾಂಕ:8.3.99 ರಿಂದ 10.3.99 | 1,750-00 |
| 14. | ಸಾಮಾಜಿಕ ವಿಜ್ಞಾನ ತರಬೇತಿ ಹೆಚ್.ವಿ.ಹಳ್ಳಿ ದಿನಾಂಕ:20.9.99 ರಿಂದ 22.9.99 | 100-00 |
| 15. | ಗಣಿತ ತರಬೇತಿ ಹೂವಿನಹಡಗಲಿ ದಿನಾಂಕ: 21.2.2000 ರಿಂದ 25.2.2000 | 840-00 |
| 16. | ಹಿಂದಿ ಭಾಷಾ ತರಬೇತಿ ಡಯಟ್ ಬಳ್ಳಾರಿ ದಿನಾಂಕ:9.2.2000 ರಿಂದ 11.2.2000 | 200-00 |
| 17. | ಸಾಫ್ಟ್ ತರಬೇತಿ ಕಾರ್ಯಾಗಾರ ಹೊಸಪೇಟೆ ದಿನಾಂಕ:15.9.99 ರಿಂದ 21.9.99 | 839-00 |
| 18. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನಹಡಗಲಿ ದಿನಾಂಕ:15.9.99 ರಿಂದ 21.9.99 | 700-00 |
| 19. | ಸಾಫ್ಟ್ ತರಬೇತಿ ಕಾರ್ಯಾಗಾರ ಸಂಡೂರು ದಿನಾಂಕ:15.9.99 ರಿಂದ 21.9.99 | 280-00 |
| 20. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನ ಹಡಗಲಿ ದಿನಾಂಕ:15.9.99 ರಿಂದ 21.9.99 | 700-00 |
| 21. | ಸಾಮಾಜಿಕ ಅಭ್ಯಾಸ ಡಯಟ್ ಬಳ್ಳಾರಿ ದಿನಾಂಕ:11.1.99 ರಿಂದ 13.1.99 | 600-00 |
| 22. | ದೈಹಿಕ ಶಿಕ್ಷಣ ಡಯಟ್ ಬಳ್ಳಾರಿ ದಿನಾಂಕ:18.1.99 ರಿಂದ 20.1.99 | 750-00 |
| 23. | ಪರಿಸರ ತರಬೇತಿ ಹೊಸಪೇಟೆ ದಿನಾಂಕ:17.8.99 ರಿಂದ 19.8.99 | 1,054-00 |

| | | |
|---|---|---|
| 24. | ಗಣಿತ ತರಬೇತಿ ಹಗರಿ ಬೊಮ್ಮನಹಳ್ಳಿ ದಿನಾಂಕ:21.2.2000 ರಿಂದ 25.2.2000 | 1,578-00 |
| 25. | ಸಾಫ್ಟ್ ತರಬೇತಿ ಸಿರಗುಪ್ಪ ದಿನಾಂಕ:15.9.99 ರಿಂದ 21.9.99 | 700-00 |
| | ಒಟ್ಟು ರೂ. | **15,526-00** |

ತರಬೇತಿ ಅವಧಿಯಲ್ಲಿ ಕೆಲಸ ನಿರ್ವಹಿಸಿದ ಡಿ ದರ್ಜೆ ನೌಕರರಿಗೆ ಸಂಭಾವನೆ ಹಣ ರೂ. 6385/-ಗಳನ್ನು ವಿತರಿಸಿರುವುದಾಗಿ ವೋಚರ್‌ಗಳನ್ನು ನಿರ್ವಹಿಸಿರುತ್ತಾರೆ. ಆದರೆ ಸದರಿ ಹಣದ ರಸೀದಿಗಳಿಗೆ ಡಿ ದರ್ಜೆಯ ನೌಕರರಿಂದ ಸಹಿ ಪಡೆಯದೆ ಇರುವುದರಿಂದ ಈ ಖರ್ಚಿನ ಬಾಬ್ತಿನ ವೋಚರ್‌ಗಳು ಬೋಗಸ್ ವೋಚರ್‌ಗಳೆಂಬುದಾಗಿ ವ್ಯಕ್ತವಾಗುತ್ತದೆ. ಈ ರೀತಿ ಸರ್ಕಾರಿ ನೌಕರರಿಗೆ ವಂಚಿಸಿ ಮೋಸ ಮಾಡಿ ಹಣವನ್ನು ದುರ್ಬಳಕೆ ಮಾಡಿ ಅಕ್ರಮವೆಸಗಿರುತ್ತಾರೆ ಹಾಗೂ ಭ್ರಷ್ಟಾಚಾರವೆಸಗಿ ಈ ತನ್ಮೂಲಕ ಅಧಿಕಾರ ದುರುಪಯೋಗಪಡಿಸಿಕೊಂಡಿರುತ್ತಾರೆ. ಈ ಬಗ್ಗೆ ಹಲವು ಆಪಾದನೆಗಳು ಬಂದ (ಇವರ ಸೇವಾ ನಿವೃತ್ತಿಯ ನಂತರ) ನಂತರ ಸಂಭಾವನೆ ವಿತರಣಾ ಪಟ್ಟಿಯಲ್ಲಿ ಸಹಿಗಳನ್ನು ನಮೂದಿಸಿರುವುದಾಗಿಯೂ ತನಿಖಾ ವರದಿಯಿಂದ ಕಂಡು ಬಂದಿದೆ. ಇಂತಹ ದುರ್ನಡತೆಯಿಂದ ಇಲಾಖೆ/ಸರ್ಕಾರವನ್ನು ವಂಚಿಸಿದ್ದಾರೆ.

| | | |
|---|---|---|
| 1. | ಸಾಫ್ಟ್ ತರಬೇತಿ ಕಾರ್ಯಾಗಾರ-ಹೆಚ್.ಬಿ. ಹಳ್ಳಿ, ದಿನಾಂಕ:14.12.99 ರಿಂದ 20.12.99 | 420 |
| 2. | ಸಾಫ್ಟ್ ತರಬೇತಿ ಕಾರ್ಯಾಗಾರ-ಹೂವಿನ ಹಡಗಲಿ ದಿನಾಂಕ:8.1.99 ರಿಂದ 14.1.1999 | 420 |
| 3. | ಸಾಫ್ಟ್ ತರಬೇತಿ ಕಾರ್ಯಾಗಾರ-ಸಿರಗುಪ್ಪ ದಿನಾಂಕ:18.1.99 ರಿಂದ 24.1.99 | 320 |
| 4. | ಸಾಫ್ಟ್ ತರಬೇತಿ ಕಾರ್ಯಾಗಾರ-ಕೂಡ್ಲಿಗಿ ದಿನಾಂಕ:8.2.99 ರಿಂದ 14.12.99 | 420 |
| 5. | ಸಾಫ್ಟ್ ತರಬೇತಿ ಕಾರ್ಯಾಗಾರ-ಸಂಡೂರು ದಿನಾಂಕ:15.2.99 ರಿಂದ 21.2.99 | 280 |
| 6. | ಸಾಫ್ಟ್ ತರಬೇತಿ ಕಾರ್ಯಾಗಾರ-ಹೊಸಪೇಟೆ ದಿನಾಂಕ:15.9.99 ರಿಂದ 21.9.99 | 420 |
| 7. | ಸಾಫ್ಟ್ ತರಬೇತಿ ಕಾರ್ಯಾಗಾರ-ಸಂಡೂರು ದಿನಾಂಕ:15.9.99 ರಿಂದ 21.9.99 | 420 + 280 |
| 8. | ಸಾಫ್ಟ್ ತರಬೇತಿ ಕಾರ್ಯಾಗಾರ-ಹೊಸಪೇಟೆ ದಿನಾಂಕ:17.1.99 ರಿಂದ 23.1.99 | 420 |
| 9. | ಸಾಫ್ಟ್ ತರಬೇತಿ ಕಾರ್ಯಾಗಾರ-ಕೂಡ್ಲಿಗಿ ದಿನಾಂಕ:19.1.2000 ರಿಂದ 25.1.2000 | 560 |
| 10. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನ ಹಡಗಲಿ ದಿನಾಂಕ:26.2.2000 ರಿಂದ | 560 |
| 11. | ಸಾಫ್ಟ್ ತರಬೇತಿ ಕಾರ್ಯಾಗಾರ ಹೂವಿನ ಹಡಗಲಿ ದಿನಾಂಕ:10.1.99 ರಿಂದ 16.1.99 | 1865 |
| | ಒಟ್ಟು ರೂ. | **6,385** |

ಈ ಮೇಲಿನ ಎಲ್ಲಾ ತರಬೇತಿಗಳ ಹಣವನ್ನು ಶ್ರೀ ಬಿ. ರಾಮರಾವ್ ಇವರು ನಿಯಮಗಳನ್ನು ಉಲ್ಲಂಘಿಸಿ ಮತ್ತು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಗಂಭೀರ ಆರ್ಥಿಕ ದುರ್ನಡತೆಯನ್ನು ಎಸಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ನಿಯಮ 3 ನ್ನು ಉಲ್ಲಂಘಿಸಿರುತ್ತಾರೆ. ಹಾಗೂ ಇಂತಹ ನಡವಳಿಕೆಗಳನ್ನು ಎಸಗುವ ಮೂಲಕ ಶಿಸ್ತಿನ ಕ್ರಮಕ್ಕೆ ತಮ್ಮನ್ನು ಅರ್ಹರನ್ನಾಗಿಸಿಕೊಂಡಿರುತ್ತಾರೆ.

**ಆರೋಪ-3 ಕ್ಕೆ ವಿವರಣೆ:**

ಶ್ರೀ ಬಿ. ರಾಮರಾವ್ ನಿವೃತ್ತ ಪ್ರಾಚಾರ್ಯರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ ಇವರು ಈ ಹಿಂದೆ ಬಳ್ಳಾರಿ ಡಯಟ್‌ನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 1997-98 ರಿಂದ 2001-2002 ರವರೆಗೆ ಈ ಸಂಸ್ಥೆಯಲ್ಲಿಯ ಡಯಟ್‌ನಲ್ಲಿಯ ಸರ್ಕಾರೇತರ ನಿಧಿಯಲ್ಲಿದ್ದ ವಿದ್ಯಾರ್ಥಿಗಳಿಂದ ಸಂಗ್ರಹಿಸಲಾಗಿದ್ದ ಹಣದಲ್ಲಿ ಒಟ್ಟು ರೂ. 1,65,854/- (1,57,604+26,850+71,400) ಗಳನ್ನು ಮುಂಗಡವಾಗಿ ಪಡೆದು ಆ ಹಣವನ್ನು ವರ್ಷಾನುಗಟ್ಟಲೆ ಸರ್ಕಾರೇತರ ನಿಧಿಗೆ ಮರುಪಾವತಿಸದೆ ಇರುವುದರಿಂದ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ಸಂಗ್ರಹಿಸಲಾಗಿದ್ದ ಈ ಹಣವು ವಿದ್ಯಾರ್ಥಿಗಳ ಅಭಿವೃದ್ಧಿ ಕಾರ್ಯಕ್ಕಾಗಿ ಬಳಸಿಕೊಳ್ಳದೆ ಹಾಗೂ ಸಂಸ್ಥೆಯ ಸದುಪಯೋಗಕ್ಕಾಗಿ ಬಳಸದೆ ಅವರೇ ಮನಸೋ ಇಚ್ಛೆಯಂತೆ ಇತರೆ ಕಾರ್ಯಕ್ಕಾಗಿ ದುರ್ವಿನಿಯೋಗಿಸಿರುವುದು ವ್ಯಕ್ತವಾಗಿದೆ. ಮತ್ತು ಈ ಮುಂಗಡ ಹಣದಿಂದ ಹಲವಾರು ಸಾಮಗ್ರಿಗಳನ್ನು ಖರೀದಿಸಿರುವುದಾಗಿ ತೋರಿಸಿದ್ದು ಈ ಸಂಬಂಧಿಸಿದಂತೆ ಖರೀದಿ ನಿಯಮಗಳನ್ನು ಪಾಲಿಸಿರುವುದಿಲ್ಲ. ಮತ್ತು ಸದರಿ ಸಾಮಗ್ರಿಗಳನ್ನು ದಾಸ್ತಾನು ಪುಸ್ತಕದಲ್ಲಿ ತೆಗೆದುಕೊಂಡಿರುವುದಿಲ್ಲ. ಇದರಿಂದ ಸಾಮಗ್ರಿಗಳನ್ನು ಖರೀದಿಸಿರುವ ಬಗ್ಗೆ ಸಂಶಯಾಸ್ಪದವಾಗಿದೆ. ಅದಲ್ಲದೆ ಸಾಮಗ್ರಿಗಳನ್ನು ಖರೀದಿಸುವ ಪೂರ್ವದಲ್ಲಿ ಮೇಲಾಧಿಕಾರಿಗಳಿಂದ ಅನುಮತಿಯನ್ನು ಪಡೆದಿರುವುದಿಲ್ಲ. ಹೀಗಾಗಿ ಸಾಮಗ್ರಿಗಳ ಅಗತ್ಯ ಇರದಿದ್ದರೂ ಸಹ ಈ ಮುಂಗಡ ಹಣದಿಂದ ಖರೀದಿಸಿ ವೆಚ್ಚಗಳನ್ನು ಭರಿಸಿರುವುದಾಗಿ ತೋರಿಸಿರುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿರುವುದು ವ್ಯಕ್ತವಾಗುತ್ತದೆ. ಕಾನೂನು ಬಾಹಿರವಾಗಿ ಹಾಗೂ ಪ್ರಚಲಿತ ಆದೇಶಗಳನ್ನು ಬದಿಗೊತ್ತಿ ಮನಸೋಇಚ್ಛೆಯಂತೆ ಹಲವಾರು ಪ್ರಕರಣಗಳಲ್ಲಿ ಹಲವಾರು ಬಾರಿ ನಿಯಮಬಾಹಿರವಾಗಿ ಸರ್ಕಾರೇತರ ಹಣವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ. ಮತ್ತು ಹಣಕಾಸಿನ ವ್ಯವಹಾರದಲ್ಲಿ ಕಛೇರಿಯ ಕಾರ್ಯಪದ್ಧತಿಯನ್ನು ಅನುಸರಿಸದೆ ಸ್ವತಃ ತಾವೇ ಹಣಕಾಸಿನ ನಿರ್ವಹಣೆಯನ್ನು ಮಾಡಿರುವುದಾಗಿಯೂ ಕಂಡು ಬಂದಿದೆ. ಸರ್ಕಾರಿ ಹಾಗೂ ಸರ್ಕಾರೇತರ ನಗದು ಪುಸ್ತಕಗಳಿಗೆ ಸಂಬಂಧಿಸಿದಂತೆ ಹಣಕಾಸಿನ ವ್ಯವಹಾರಗಳನ್ನು ಸ್ವಂತ ಬಿ. ರಾಮರಾವ್ ರವರೇ ನಿರ್ವಹಿಸಿದ್ದು, ಕಾರ್ಯ ನಿರ್ವಾಹಕರಿಗೆ ಕೇವಲ ರಸೀದಿಗಳನ್ನು ಮಾತ್ರ ದಾಖಲಿಸಲು ಸೂಚಿಸಿರುತ್ತಾರೆ. ಇದಕ್ಕೆ ಪೂರಕವಾಗಿ ಶ್ರೀಮತಿ ಗೌಹರ್ ಖಾನಂ, ಪ್ರದಸ, ಡಯಟ್, ಬಳ್ಳಾರಿ ಇವರು ಲಿಖಿತವಾಗಿ ನೀಡಿರುವ ಹೇಳಿಕೆಯಂತೆ ಈ ಅಂಶವು ಶೃತಪಟ್ಟಿದೆ. ಕಛೇರಿಯ ಕಾರ್ಯಪದ್ಧತಿ ಅನುಸಾರ ಸಂಬಂಧ ಕಡತಗಳು ವಿಷಯ ನಿರ್ವಾಹಕರು, ಅಧೀಕ್ಷಕರು, ವ್ಯವಸ್ಥಾಪಕರು, ಈ ರೀತಿ ನಿರ್ವಹಣೆಯಾಗದೇ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯಚ್ಯುತಿ ಎಸಗಿರುತ್ತಾರೆ ಹಾಗೂ ಸರ್ವಾಧಿಕಾರಿಯಂತೆ ವರ್ತಿಸಿರುತ್ತಾರೆ.

ಇದೇ ಸರ್ಕಾರೇತರ ನಿಧಿಯಿಂದ ದಿನಾಂಕ: 31.3.2001 ರಂದು ರೂ. 71,400/- ಗಳನ್ನು ಮುಂಗಡ ಡ್ರಾ ಮಾಡಿ ಪ್ರಾಂಶುಪಾಲರ ಸದನದ ಪೀಠೋಪಕರಣ ಹಾಗೂ ಗ್ರಂಥಾಲಯ ಪುಸ್ತಕ ಖರೀದಿಗಾಗಿ ಖರ್ಚು ಮಾಡಿರುವುದಾಗಿ ಓಚರ್‌ಗಳನ್ನು ಭರಿಸಿರುತ್ತಾರೆ. ಈ ರೀತಿ ಖರ್ಚು ಮಾಡಲು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಇವರಿಂದ ಪೂರ್ವಾನುಮತಿ ಪಡೆದಿರುವುದಿಲ್ಲ. ಈಗಾಗಲೇ ಸರ್ಕಾರಿ ನಿಧಿಯಿಂದ ರೂ. 32,700/- ಗಳ ಗ್ರಂಥಾಲಯ ಪುಸ್ತಕಗಳನ್ನು ದಿನಾಂಕ: 7.6.2000 ರಂದು ಖರೀದಿಸಲಾಗಿದ್ದು, ಪುನಃ ಸರ್ಕಾರೇತರ ನಿಧಿಯಿಂದ ರೂ. 32,750/- ಮೌಲ್ಯದ ಪುಸ್ತಕಗಳನ್ನು 2001ರ ಮಾರ್ಚ್ 31 ರಂದು ಖರೀದಿಸುವ ಔಚಿತ್ಯವೇನೆಂಬುದು ತಿಳಿದು ಬಂದಿರುವುದಿಲ್ಲ. ಈ ಪುಸ್ತಕಗಳನ್ನು ದಾಸ್ತಾನು ಪುಸ್ತಕದಲ್ಲಿ ನೊಂದಣಿ ಮಾಡಿರುವುದಿಲ್ಲ. ಹೀಗಾಗಿ ಇವರು ರೂ. 71400/-ಗಳ ಪುಸ್ತಕಗಳನ್ನು ಖರೀದಿಸದೆ ಬೋಗಸ್ ವೋಚರ್‌ಗಳನ್ನು ಹಾಕಿ ಹಣ ಲಪಟಾಯಿಸಿರುವುದು ಮತ್ತು ಸರ್ಕಾರಕ್ಕೆ ವಂಚನೆ ಮಾಡಿ ಭ್ರಷ್ಟಾಚಾರವೆಸಗಿರುವುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಸರ್ಕಾರೇತರ ನಿಧಿಯಿಂದ ದಿನಾಂಕ: 9.3.2000 ರಂದು ಸಿ.ಟಿ.ಸಿ. ಕ್ಯಾಂಪ್‌ಗಾಗಿ ರೂ. 26,850/- ಗಳನ್ನು ಡ್ರಾ ಮಾಡಿದ್ದು, ಈ ಹಣವನ್ನು ನಿಯಮಾನುಸಾರ ಖರ್ಚು ಮಾಡಿದ ಬಗ್ಗೆ ಯಾವುದೇ ವಿವರಗಳನ್ನು ಇಟ್ಟಿರುವುದಿಲ್ಲ. ಈ ಕ್ಯಾಂಪ್ ನಡೆಸಿದ ಬಗ್ಗೆ ಸಂಶಯವಿದ್ದು, ಪೂರ್ಣ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಸಾಬೀತಾಗಿದೆ.

ಎ.ಸಿ.ಬಿಲ್ಲು ಸಂಖ್ಯೆ:8/99-2000 ದಿ: 16.3.2000 ರೂ. 1,00,000 ಗಳನ್ನು ಡ್ರಾ ಮಾಡಲಾಗಿದ್ದು ಈ ಹಣದ ವೆಚ್ಚಗಳಿಗೆ ಸಂಬಂಧಿಸಿದ ಹಣಕಾಸಿನ ದಾಖಲೆಗಳು ಲೆಕ್ಕ ತಪಾಸಣೆ ಕಾಲಕ್ಕೆ ಪರಿಶೋಧನೆ ಕಾರ್ಯಕ್ಕೆ ಒಳಪಟ್ಟಿರುವುದಿಲ್ಲವೆಂಬುದು ತಪಾಸಣಾ ವರದಿಯಿಂದ ಕಂಡು ಬಂದಿದೆ. ಈ ಹಣವು ದುರ್ಬಳಕೆಯಾಗಿರುವುದು ವ್ಯಕ್ತವಾಗಿದೆ.

ಎ.ಸಿ.ಬಿಲ್ಲು ಸಂಖ್ಯೆ9/99-2000 ಹಾಗೂ ಎ.ಸಿ. ಬಿಲ್ಲು ಸಂಖ್ಯೆ10/99-2000: ದಿ: 28.3.2000ರ ಮೂಲಕ ಕ್ರಮವಾಗಿ ರೂ.64200 ಹಾಗೂ 30,000 ಗಳನ್ನು ಡ್ರಾ ಮಾಡಲಾಗಿದ್ದು ಈ ಹಣ ಒಟ್ಟು ರೂ. 94200/- ಗಳನ್ನು ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ರವರಿಗೆ ದಿನಾಂಕ: 10.4.2000 ರಂದು ಮುಖ್ಯ ಶಿಕ್ಷಕರ ತರಬೇತಿ ನಡೆಸಲು ಕೊಟ್ಟಿರುವುದಾಗಿ ಕಂಡು ಬಂದಿದೆ. ಆದರೆ ಈ ಹಣವನ್ನು ಉಪ ನಿರ್ದೇಶಕರಿಗೆ ತಲುಪಿಸಿದ ಬಗ್ಗೆ ಅವರಿಂದ ಸ್ವೀಕೃತಿ ಪತ್ರವಾಗಲಿ, ಹಾಗೂ ಉಪ ನಿರ್ದೇಶಕರು ಬಳ್ಳಾರಿ ಇವರು ತರಬೇತಿಯನ್ನು ನಡೆಸಿದ ಖರ್ಚುವೆಚ್ಚಗಳ ಬಗ್ಗೆ ಅವರಿಂದ ದಾಖಲೆಗಳನ್ನು ಪಡೆದು ನಿರ್ವಹಿಸಿರುವುದಿಲ್ಲ. ಹೀಗಾಗಿ ಬಳ್ಳಾರಿ ಉಪ ನಿರ್ದೇಶಕರಿಗೆ ಈ ಹಣವನ್ನು ತಲುಪಿಸಿದ ಬಗ್ಗೆ ಸಂಶಯವಿದೆ.

ಸಂಸ್ಥೆಯ ನಗದು ವಹಿಗಳಿಗೂ ಮತ್ತು ತುಂಗಭದ್ರಾ ಗ್ರಾಮೀಣ ಬ್ಯಾಂಕ್, ಬಳ್ಳಾರಿ ಖಾತೆ ಸಂಖ್ಯೆ 6915, ಇಂಡಿಯನ್ ಬ್ಯಾಂಕ್ ಬಳ್ಳಾರಿ, ಖಾತೆ ಸಂ. 8056, ಎಸ್.ಬಿ.ಎಂ. ಖಾ ಸಂ ಸಿ ಅಂಡ್ ಐ 10421, ಎಸ್.ಬಿ.ಎಂ. ಖಾ ಸಂ ಸಿ ಅಂಡ್ ಐ 105 ಇಲ್ಲಿಯ ಹಣಗಳಿಗೂ ರೂ. 6538/- ಗಳು ವ್ಯತ್ಯಾಸವಿದ್ದು, ಮತ್ತು ಇದೇ ರೀತಿ ದಿ:12.12.01 ರಂದು ವಿದ್ಯಾರ್ಥಿ ವೇತನ ಹಣ ರೂ. 1552 ರೂ ಇಂಡಿಯನ್ ಬ್ಯಾಂಕ್ ಖಾತೆಯಲ್ಲಿದೆ. ನಗದು ವಹಿ ಪ್ರಕಾರ ರೂ. 1777/- ಇರುತ್ತದೆ. ಈ ಹಣದ ವ್ಯತ್ಯಾಸ ರೂ. 225/- ಇದೆ. ಇದರಿಂದಾಗಿ ಇವರ ಅವಧಿಯ ಹಣಕಾಸಿನ ದಾಖಲೆಗಳನ್ನು ಸಮರ್ಪಕವಾಗಿ ನಿರ್ವಹಿಸದಿರುವುದು ಖಚಿತವಾಗಿದೆ.

2001-02ನೇ ಸಾಲಿನಲ್ಲಿ ದ್ವಿತೀಯ ವರ್ಷದ ಎಸ್.ಸಿ:ಎಸ್.ಟಿ. ವಿದ್ಯಾರ್ಥಿಗಳಿಂದ ಸರ್ಕಾರೇತರ ಶುಲ್ಕವನ್ನು ಪ್ರಾಂಶುಪಾಲರು ವಸೂಲಿ ಮಾಡಿರುವುದಿಲ್ಲ. ಈ ಹಣ ರೂ. 15050 ಗಳನ್ನು ವಸೂಲಿ ಮಾಡದೇ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿದ್ದಾರೆ.

ಸರ್ಕಾರೇತರ ನಗದು ವಹಿಯ ಪ್ರಕಾರ ದಿ: 4.4.2002ರಂದು ರೂ. 5669 ಗಳನ್ನು ಡ್ರಾ ಮಾಡಿ ಮಿ ನವ ಕರ್ನಾಟಕ ಮೋಟಾರ್ಸ್‌ರವರಿಗೆ ಜೀಪ್ ರಿಪೇರಿಗಾಗಿ ಪಾವತಿ ತೋರಿಸಲಾಗಿದೆ. ಆದರೆ ರಿಪೇರಿ ಅವಶ್ಯಕತೆ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಶಿಫಾರಸ್ಸು ಪತ್ರ ಪಡೆದಿರುವ ದಾಖಲೆಯಿಲ್ಲ. ರಿಪೇರಿಯ ನಂತರ ತೃಪ್ತಿಕರವಾಗಿ ಆಗಿದೆ ಎಂಬುದಕ್ಕೆ ಲಾಗ್ ಬುಕ್‌ನಲ್ಲಿ ಸಾರಿಗೆ ಅಧಿಕಾರಿಗಳಿಂದ ದೃಢೀಕರಣವಿರುವುದಿಲ್ಲ. ಈ ಹಣವು ದುರ್ಬಳಕೆಯಾಗಿದೆ.

ದಿ: 23.5.02 ರಂದು ರೂ. 1264 ದೂರವಾಣಿ ಬಿಲ್ಲನ್ನು ಪಾವತಿಸಲಾಗಿದೆ. ಮರು ತುಂಬಿಸುವ ಷರತ್ತಿನ ಮೇಲೆ ಡ್ರಾ ಮಾಡಲಾದ ಈ ಹಣವನ್ನು ಪ್ರಾಂಶುಪಾಲರು ಮರು ತುಂಬಿಸಿರುವುದಿಲ್ಲ, ಇದರಿಂದಾಗಿ ಇವರ ಅವಧಿಯ ಹಣಕಾಸಿನ ದಾಖಲೆಗಳನ್ನು ಸಮರ್ಪಕವಾಗಿ ನಿರ್ವಹಿಸದಿರುವುದು ಖಚಿತವಾಗಿದೆ.

ಈ ಮೇಲಿನ ಎಲ್ಲಾ ತರಬೇತಿಗಳ ಹಣವನ್ನು ಶ್ರೀ ಬಿ. ರಾಮರಾವ್ ಇವರು ನಿಯಮಗಳನ್ನು ಉಲ್ಲಂಘಿಸಿ ಮತ್ತು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಗಂಭೀರ ಆರ್ಥಿಕ ದುರ್ನಡತೆಯನ್ನು ಎಸಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ನಿಯಮ 3ನ್ನು ಉಲ್ಲಂಘಿಸಿರುತ್ತಾರೆ. ಹಾಗೂ ಇಂತಹ ನಡವಳಿಕೆಗಳನ್ನು ಎಸಗುವ ಮೂಲಕ ಶಿಸ್ತಿನ ಕ್ರಮಕ್ಕೆ ಅರ್ಹರನ್ನಾಗಿಸಿಕೊಂಡಿರುತ್ತಾರೆ.

## ಅನುಬಂಧ-3

**ಆರೋಪ-1 ಕ್ಕೆ ದಾಖಲೆಗಳು**

1. ಮುಖ್ಯ ಲೆಕ್ಕಾಧಿಕಾರಿಗಳು ಆಯುಕ್ತರ ಕಛೇರಿ ಬೆಂಗಳೂರು ಇವರು ಡಯಟ್ ಬಳ್ಳಾರಿ ಇಲ್ಲಿಯ ಹಣಕಾಸಿನ ವಹಿವಾಟಿನ ಬಗ್ಗೆ ನಡೆಸಿರುವ ಲೆಕ್ಕ ಪರಿಶೋಧನೆಯ ವರದಿಗಳು 1997-98ನೇ ಸಾಲಿನಿಂದ 2002-03ನೇ ಸಾಲಿನವರೆಗೆ.
2. ತರಬೇತಿಗಳಿಗಾಗಿ ಖರೀದಿಸಿದ ಲೇಖನ ಸಾಮಗ್ರಿಗಳ ಹಾಗೂ ಚಹಾ ಕಾಫಿ, ವಿತರಿಸಿದ ಹೋಟೆಲಿನ ರಸೀದಿಗಳ ಒಟ್ಟು ಮೊತ್ತ ರೂ. 165854 ಗಳಿಗೆ ಸಂಬಂದಿಸಿರುವ ಖರ್ಚುವೆಚ್ಚಗಳ ವೋಚರ್‌ಗಳು.
3. ನಗದು ವಹಿಗಳು ಹಾಗೂ ಹಣಕಾಸಿನ ದಾಖಲೆಗಳು.

**ಆರೋಪ-2 ಕ್ಕೆ ದಾಖಲೆಗಳು**

1. ಮುಖ್ಯ ಲೆಕ್ಕಾಧಿಕಾರಿಗಳು ಆಯುಕ್ತರ ಕಛೇರಿ ಬೆಂಗಳೂರು ಇವರು ಡಯಟ್ ಬಳ್ಳಾರಿ ಇಲ್ಲಿಯ ಹಣಕಾಸಿನ ವಹಿವಾಟಿನ ಬಗ್ಗೆ ನಡೆಸಿರುವ ಲೆಕ್ಕ ಪರಿಶೋಧನೆಯ ವರದಿಗಳು 1997-98ನೇ ಸಾಲಿನಿಂದ 2002-03ನೇ ಸಾಲಿನವರೆಗೆ.

2. ಸಂಪನ್ಮೂಲ ವ್ಯಕ್ತಿಗಳಿಗೆ ಸಂಭಾವನೆ ರೂಪದಲ್ಲಿ ಹೆಚ್ಚಿಗೆ ಹಣ ಪಾವತಿಸಿರುವ ಒಟ್ಟು ಮೊತ್ತ ರೂ. 15526/-ಗಳ ವೋಚರ್‌ಗಳು

3. ಡಿ. ದರ್ಜೆ ನೌಕರರಿಗೆ ಸಂಭಾವನೆ ನೀಡಿದ ಹಣದ ಒಟ್ಟು ಮೊತ್ತ ರೂ. 6385/-ಗಳು ಬಟವಾಡೆ ವೋಚರ್‌ಗಳು

4. ನಗದು ವಹಿಗಳು ಹಾಗೂ ಹಣಕಾಸಿನ ದಾಖಲೆಗಳು.

**ಆರೋಪ-3 ಕ್ಕೆ ದಾಖಲೆಗಳು**

1. ಮುಖ್ಯ ಲೆಕ್ಕಾಧಿಕಾರಿಗಳು ಆಯುಕ್ತರ ಕಛೇರಿ ಬೆಂಗಳೂರು ಇವರು ಡಯಟ್ ಬಳ್ಳಾರಿ ಇಲ್ಲಿಯ ಹಣಕಾಸಿನ ವಹಿವಾಟಿನ ಬಗ್ಗೆ ನಡೆಸಿರುವ ಲೆಕ್ಕ ಪರಿಶೋಧನೆಯ ವರದಿಗಳು 1997-98ನೇ ಸಾಲಿನಿಂದ 2002-03ನೇ ಸಾಲಿನವರೆಗೆ.

2. ಶ್ರೀಮತಿ ಗೌರಹಖಾನಂ, ಪ್ರದಸ, ಡಯೆಟ್, ಬಳ್ಳಾರಿ, ಇವರು ಬರೆದು ಕೊಟ್ಟ ಲಿಖಿತ ಹೇಳಿಕೆ.

3. ರೂ. 5,03,650/- ಗಳಿಗೆ ಸಂಬಂಧಿಸಿದ ಹಾಗೂ ಎಸ್.ಸಿ.ಎಸ್.ಟಿ. ವಿದ್ಯಾರ್ಥಿಗಳಿಂದ ವಸೂಲಿತ ಸರ್ಕಾರೇತರ ಹಣದ ಸಂಬಂಧಿತ ದಾಖಲೆಗಳು

4. ನಗದು ವಹಿಗಳು ಹಾಗೂ ಹಣಕಾಸಿನ ದಾಖಲೆಗಳು, ಬ್ಯಾಂಕ್ ಪಾಸ್ ಪುಸ್ತಕಗಳು, ಬಟವಾಡೆ ವಹಿಗಳು.

**ಅನುಬಂಧ-4**

**ಆರೋಪ-1 ಕ್ಕೆ ಸಾಕ್ಷಿಗಳು**

1. ಶ್ರೀ ಕೆ.ಜಿ. ಸಿದ್ದಪ್ಪ, ಉಪನ್ಯಾಸಕರು, ಡಯಟ್, ಬಳ್ಳಾರಿ.
2. ಶ್ರೀ ಬಿ. ಪರಸಪ್ಪ, ಉಪನ್ಯಾಸಕರು, ಡಯಟ್, ಬಳ್ಳಾರಿ.
3. ಶ್ರೀ ಬಿ. ಪ್ರಕಾಶ, ಉಪನ್ಯಾಸಕರು, ಡಯಟ್, ಬಳ್ಳಾರಿ.
4. ಶ್ರೀ ಪಿ. ಸಾರಂಗಪಾಣಿ, ಉಪನ್ಯಾಸಕರು, ಡಯಟ್, ಬಳ್ಳಾರಿ.
5. ಶ್ರೀಮತಿ ಅನ್ನಪೂರ್ಣ, ಉಪನ್ಯಾಸಕರು, ಡಯಟ್, ಬಳ್ಳಾರಿ.
6. ಶ್ರೀ ಆರ್.ಎಲ್. ಜಾಧವ್, ಚಿತ್ರಕಲಾ ಶಿಕ್ಷಕರು, ಡಯಟ್, ಬಳ್ಳಾರಿ.
7. ಶ್ರೀ ಇ.ಟಿ. ಆನಂದ, ಉಪನ್ಯಾಸಕರು, ಡಯಟ್, ಬಳ್ಳಾರಿ.
8. ಶ್ರೀ ಬಿ.ಎನ್. ಹುಲಿಮನಿ, ಉಪನ್ಯಾಸಕರು, ಡಯಟ್, ಬಳ್ಳಾರಿ.
9. ಶ್ರೀ ಆರ್. ನಾಗರಾಜೇಂದ್ರಪ್ಪ, ಉಪನ್ಯಾಸಕರು, ಡಯಟ್, ಬಳ್ಳಾರಿ.
10. ಶ್ರೀ ಈಶಪ್ಪ, ಉಪನ್ಯಾಸಕರು, ಡಯಟ್, ಬಳ್ಳಾರಿ.
11. ಶ್ರೀ ಬಸವರಾಜ, ಉಪನ್ಯಾಸಕರು, ಡಯಟ್, ಬಳ್ಳಾರಿ.
12. ಶ್ರೀ ಬಿ. ಮರೇಗೌಡ, ಉಪನ್ಯಾಸಕರು, ಡಯಟ್, ಬಳ್ಳಾರಿ.
13. ಶ್ರೀ ಜಿ.ಎಂ. ಗುರುಬಸವಯ್ಯ, ಉಪನ್ಯಾಸಕರು, ಡಯಟ್, ಬಳ್ಳಾರಿ.
14. ಶ್ರೀಮತಿ ನಿರ್ಮಲಾ, ಉಪನ್ಯಾಸಕರು, ಡಯಟ್, ಬಳ್ಳಾರಿ.
15. ಶ್ರೀ ಹೆಚ್.ಪಿ. ಚಂದ್ರಶೇಖರ್, ಉಪನ್ಯಾಸಕರು, ಡಯಟ್, ಬಳ್ಳಾರಿ.
16. ಶ್ರೀ ಜಿ.ಎಂ. ತಿಪ್ಪೇಸ್ವಾಮಿ, ಉಪನ್ಯಾಸಕರು, ಡಯಟ್, ಬಳ್ಳಾರಿ.
17. ಶ್ರೀಮತಿ ಆರ್.ಕೆ. ವಾಣಿ, ಉಪನ್ಯಾಸಕರು, ಡಯಟ್, ಬಳ್ಳಾರಿ.
18. ಶ್ರೀ ಅಶೋಕ ಕುಮಾರ ಸಿಂಧಗಿ, ಹಿಂದಿನ ಉಪನ್ಯಾಸಕರು, ಡಯಟ್, ಬಳ್ಳಾರಿ.
19. ಶ್ರೀ ಶೇಷಗಿರಿದಾಸ್, ಅಧೀಕ್ಷಕರು, ಶ್ರೀ ಕೆ.ಜಿ. ಮಾನಪ್ಪ, ಪ್ರ.ದ.ಸ., ಶ್ರೀ ಎಸ್.ಬಿ. ಶ್ಯಾಂಸುಂದರ್, ಪ್ರ.ದ.ಸ. ಹಾಗೂ ಉಳಿದ ಎಲ್ಲಾ ಸಿಬ್ಬಂದಿ ವರ್ಗದವರು, ಡಯೆಟ್, ಬಳ್ಳಾರಿ.

**ಆರೋಪ-2 ಕ್ಕೆ ಸಾಕ್ಷಿಗಳು**

1. ಶ್ರೀಮತಿ ಅನ್ನಪೂರ್ಣ, ಉಪನ್ಯಾಸಕರು, ಡಯಟ್, ಬಳ್ಳಾರಿ.
2. ಶ್ರೀ ಟಿ. ಪರುಸಪ್ಪ, ಉಪನ್ಯಾಸಕರು, ಡಯಟ್, ಬಳ್ಳಾರಿ.
3. ಶ್ರೀ ಶ್ರೀನಿವಾಸ ರೆಡ್ಡಿ, ಸಹ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಬಳ್ಳಾರಿ.
4. ಶ್ರೀ ಆರ್. ನಾಗರಾಜೇಂದ್ರಪ್ಪ, ಉಪನ್ಯಾಸಕರು, ಡಯೆಟ್, ಬಳ್ಳಾರಿ.
5. ಶ್ರೀ ಇಕ್ಬಾಲ ಹುಸೇನ, ವಾಹನ ಚಾಲಕ, ಡಯೆಟ್, ಬಳ್ಳಾರಿ.
6. ಶ್ರೀ ಬಸವರಾಜ, ಉಪನ್ಯಾಸಕರು, ಡಯಟ್, ಬಳ್ಳಾರಿ.
7. ಶ್ರೀ ವಿ. ರಾಜಣ್ಣ, ವಾಹನ ಚಾಲಕರು, ಡಯಟ್, ಬಳ್ಳಾರಿ.
8. ಶ್ರೀ ಬಿ. ಮಾರೆಗೌಡ, ಉಪನ್ಯಾಸಕರು, ಡಯಟ್, ಬಳ್ಳಾರಿ.
9. ಶ್ರೀ ಹೆಚ್.ಪಿ. ಚಂದ್ರಶೇಖರ್, ಉಪನ್ಯಾಸಕರು, ಡಯಟ್, ಬಳ್ಳಾರಿ.
10. ಶ್ರೀಮತಿ ಎ. ವೆಂಕಮ್ಮ ಪರಿಚಾಲಕರು, ಡಯಟ್, ಬಳ್ಳಾರಿ.
11. ಶ್ರೀಮತಿ ಸಾವಿತ್ರಿದೇವಿ, ಪರಿಚಾಲಕರು, ಡಯಟ್, ಬಳ್ಳಾರಿ.
12. ಶ್ರೀ ನಿಸಾರ ಅಹ್ಮದ್, ಪರಿಚಾಲಕರು, ಡಯಟ್, ಬಳ್ಳಾರಿ.
13. ಶ್ರೀ ಅಶೋಕ, ಪರಿಚಾಲಕರು, ಡಯಟ್, ಬಳ್ಳಾರಿ.
14. ಶ್ರೀ ಹೆಚ್. ವೆಂಕೋಬ, ಪರಿಚಾಲಕರು, ಡಯಟ್, ಬಳ್ಳಾರಿ.

15. ಶ್ರೀ ಭಾಷಾ, ಪರಿಚಾಲಕರು, ಡಯಟ್, ಬಳ್ಳಾರಿ.

16. ಶ್ರೀ ಹಣಮಂತಪ್ಪ, ಪರಿಚಾಲಕರು, ಡಯಟ್, ಬಳ್ಳಾರಿ.

17. ಶ್ರೀ ಹಬೀಬ, ಪರಿಚಾಲಕರು, ಡಯಟ್, ಬಳ್ಳಾರಿ.

18. ಶ್ರೀ ರಾಮಪ್ಪ, ಪರಿಚಾಲಕರು, ಡಯಟ್, ಬಳ್ಳಾರಿ.

19. ಶ್ರೀ ಶೇಷಗಿರಿದಾಸ್, ಅಧೀಕ್ಷಕರು, ಶ್ರೀ ಕೆ.ಜಿ. ಮಾನಪ್ಪ, ಪ್ರ.ದ.ಸ., ಶ್ರೀ ಎಸ್.ಬಿ. ಶ್ಯಾಂಸುಂದರ್, ಪ್ರ.ದ.ಸ., ಹಾಗೂ ಉಳಿದ ಎಲ್ಲಾ ಸಿಬ್ಬಂದಿ ವರ್ಗದವರು, ಡಯೆಟ್, ಬಳ್ಳಾರಿ.

**ಆರೋಪ-3 ಕ್ಕೆ ಸಾಕ್ಷಿಗಳು**

1. ಶ್ರೀಮತಿ ಗೌಹರ್ ಖಾನಂ, ಪ್ರದಸ, ಡಯಟ್ ಬಳ್ಳಾರಿ.

2. ಶ್ರೀ ಶೇಷಗಿರಿದಾಸ್, ಅಧೀಕ್ಷಕರು, ಶ್ರೀ ಕೆ.ಜಿ. ಮಾನಪ್ಪ ಪ್ರ.ದ.ಸ., ಶ್ರೀ ಎಸ್.ಬಿ. ಶ್ಯಾಂಸುಂದರ್, ಪ್ರ.ದ.ಸ., ಹಾಗೂ ಉಳಿದ ಎಲ್ಲಾ ಸಿಬ್ಬಂದಿ ವರ್ಗದವರು, ಡಯೆಟ್, ಬಳ್ಳಾರಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

**ಸರ್ಕಾರಿ ಆದೇಶ ಸಂಖ್ಯೆ:ಇ ಡಿ 88 ಡಿಜಿಡಿ 2002, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2003**

ಶ್ರೀ ಬಿ. ರಾಮರಾವ್, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಇ ವರು ಈ ಹಿಂದೆ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ, ಇ ಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ನಿಯಮಬಾಹಿರವಾಗಿ ಕಾರ್ಯನಿರ್ವಹಿಸಿ, ಗುರುತರವಾದ ದುರ್ನಡತೆ ಎಸಗಿ ಆರೋಪಗಳಿಗೆ ನೇರ ಕಾರಣರಾಗಿರುವುದು ಮೇಲು ನೋಟಕ್ಕೆ ಸತ್ಯವೆಂದು ಕಂಡುಬಂದ ಹಿನ್ನೆಲೆಯಲ್ಲಿ, ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟುಮಾಡಲು ಕಾರಣರಾಗಿ ಕೆಸಿಎಸ್ (ನಡತೆ) ನಿಯಮಾವಳಿಗಳು 1966 ರ ನಿಯಮ 3 ನ್ನು ಉಲ್ಲಂಘಿ ಸಿ ಸರ್ಕಾರಿ ನೌಕರನ ನಡತೆಗೆ ಸಲ್ಲದ ರೀತಿಯಲ್ಲಿ ಕಾರ್ಯನಿರ್ವಹಿಸಿರುವುದರಿಂದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ರಾಮರಾವ್, ಇ ವರ ವಿರುದ್ಧ ಇ ಲಾಖಾ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿ ಆದೇಶ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

ಪಿ.ಆರ್. 900

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಭಾರಿ ನೀರಾವರಿ ಯೋಜನೆಗಳ ನಿಯಂತ್ರಣ ಮಂಡಳಿ ಹಾಗೂ ತಾಂತ್ರಿಕ ಸಲಹಾ ಸಮಿತಿಗಳ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ನೀಇ 13 ಎನ್‌ಪಿಸಿ 1996 ದಿನಾಂಕ: 29.5.1999.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಭಾರಿ ನೀರಾವರಿ ಯೋಜನೆಗಳ ನಿಯಂತ್ರಣ ಮಂಡಳಿಯನ್ನು (ಎಂ.ಐ.ಪಿ.ಸಿ. ಬೋರ್ಡ್) ಮತ್ತು ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

2. ಭಾರಿ ನೀರಾವರಿ ಯೋಜನೆಗಳ ನಿಯಂತ್ರಣ ಮಂಡಳಿ ಹಾಗೂ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 60 ಎನ್‌ಪಿಸಿ 2004, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2004**

ಭಾರಿ ನೀರಾವರಿ ಯೋಜನೆಗಳ ನಿಯಂತ್ರಣ ಮಂಡಳಿ ಹಾಗೂ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

**ಭಾರಿ ನೀರಾವರಿ ಯೋಜನೆಗಳ ನಿಯಂತ್ರಣ ಮಂಡಳಿ:**

1. ಮಾನ್ಯ ಮುಖ್ಯಮಂತ್ರಿಗಳು .. ಅಧ್ಯಕ್ಷರು
2. ಮಾನ್ಯ ಜಲ ಸಂಪನ್ಮೂಲ ಹಾಗೂ ಸಾರಿಗೆ ಸಚಿವರು .. ಉಪಾಧ್ಯಕ್ಷರು

**ಅಧಿಕಾರೇತರ ಸದಸ್ಯರುಗಳು**

1. ಶ್ರೀ ಕೆ.ಸಿ. ರೆಡ್ಡಿ ಲೋಕೋಪಯೋಗಿ ಹಾಗೂ ಇಂಧನ ಇಲಾಖೆ ತಾಂತ್ರಿಕ ಸಲಹೆಗಾರರು .. ಸದಸ್ಯರು
2. ಶ್ರೀ ಎನ್.ಆರ್. ವೆಂಕಟೇಶ್ ಪ್ರಸಾದ್, ನಿವೃತ್ತ, ಜಲ ಸಂಪನ್ಮೂಲ ಇಲಾಖೆ ಕಾರ್ಯದರ್ಶಿಗಳು .. ಸದಸ್ಯರು
3. ಶ್ರೀ ಆರ್.ಎ. ಚೌದಿ, ನಿವೃತ್ತ, ಲೋಕೋಪಯೋಗಿ ಕಾರ್ಯದರ್ಶಿಗಳು .. ಸದಸ್ಯರು

4. ಶ್ರೀ ಎಸ್.ಜೆ. ಚನ್ನಬಸಪ್ಪ, ನಿವೃತ್ತ, ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ .. ಸದಸ್ಯರು
5. ಶ್ರೀ ಜೆ. ಡಬ್ಲ್ಯೂ. ರಸ್ಕಿನ, ನಿವೃತ್ತ, ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ .. ಸದಸ್ಯರು
6. ಶ್ರೀ ಆರ್. ನಾಗೇಂದ್ರ, ನಿವೃತ್ತ ಪ್ರಧಾನ ಇಂಜಿನಿಯರ್ .. ಸದಸ್ಯರು
7. ಶ್ರೀ ಗುಲಾಂ ಅಹ್ಮದ್, ನಿವೃತ್ತ ಮುಖ್ಯ ಇಂಜಿನಿಯರ್ .. ಸದಸ್ಯರು
8. ಶ್ರೀ ಕೆ.ಎಂ. ರುದ್ರಸ್ವಾಮಿ, ನಿವೃತ್ತ, ಮುಖ್ಯ ಇಂಜಿನಿಯರ್ .. ಸದಸ್ಯರು
9. ಶ್ರೀ ಪಿ. ಪ್ರಕಾಶ್, ನಿವೃತ್ತ, ಮುಖ್ಯ ಇಂಜಿನಿಯರ್ .. ಸದಸ್ಯರು

**ಅಧಿಕಾರಿ ಸದಸ್ಯರುಗಳು**

1. ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ .. ಸದಸ್ಯರು
2. ಕಾರ್ಯದರ್ಶಿಗಳು, ಕಾನೂನು ಇಲಾಖೆ .. ಸದಸ್ಯರು
3. ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ .. ಸದಸ್ಯರು
4. ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು .. ಸದಸ್ಯರು
5. ಉಪ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕೆ.ಬಿ.ಜೆ.ಎನ್) .. ಸದಸ್ಯ-ಕಾರ್ಯದರ್ಶಿ

**ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿ**

1. ಶ್ರೀ ಕೆ.ಸಿ. ರೆಡ್ಡಿ, ಲೋಕೋಪಯೋಗಿ ಹಾಗೂ ಇಂಧನ ಇಲಾಖೆ ತಾಂತ್ರಿಕ ಸಲಹೆಗಾರರು .. ಅಧ್ಯಕ್ಷರು

**ಅಧಿಕಾರೇತರ ಸದಸ್ಯರುಗಳು**

1. ಶ್ರೀ ಕೆ. ಶಿವಶಂಕರ್, ನಿವೃತ್ತ, ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ .. ಸದಸ್ಯರು
2. ಶ್ರೀ ಎಸ್.ಜೆ. ಚನ್ನಬಸಪ್ಪ, ನಿವೃತ್ತ, ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ .. ಸದಸ್ಯರು
3. ಶ್ರೀ ಜೆ.ಡಬ್ಲ್ಯೂ. ರಸ್ಕಿನ, ನಿವೃತ್ತ, ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ .. ಸದಸ್ಯರು
4. ಶ್ರೀ ಆರ್. ನಾಗೇಂದ್ರ, ನಿವೃತ್ತ, ಪ್ರಧಾನ ಇಂಜಿನಿಯರ್ .. ಸದಸ್ಯರು
5. ಶ್ರೀ ಪಿ. ಸಿದ್ದಪ್ಪ, ನಿವೃತ್ತ, ಪ್ರಧಾನ ಇಂಜಿನಿಯರ್ .. ಸದಸ್ಯರು
6. ಶ್ರೀ ಗುಲಾಂ ಅಹ್ಮದ್, ನಿವೃತ್ತ, ಮುಖ್ಯ ಇಂಜಿನಿಯರ್ .. ಸದಸ್ಯರು
7. ಶ್ರೀ ಪಿ. ಪ್ರಕಾಶ್, ನಿವೃತ್ತ, ಮುಖ್ಯ ಇಂಜಿನಿಯರ್ .. ಸದಸ್ಯರು
8. ಶ್ರೀ ಬಿ.ಜೆ. ನಾಗರಾಜ್, ನಿವೃತ್ತ, ಸೂಪರಿಂಟೆಂಡಿಂಗ್ ಇಂಜಿನಿಯರ್ .. ಸದಸ್ಯರು

**ಅಧಿಕಾರಿ ಸದಸ್ಯರುಗಳು**

1 ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ .. ಸದಸ್ಯರು
2 ಉಪ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕೆ.ಬಿ.ಜೆ.ಎನ್) .. ಸದಸ್ಯರು
3 ಕಾರ್ಯದರ್ಶಿ, ತಾಂತ್ರಿಕ ಸಲಹಾ ಸಮಿತಿ .. ಸದಸ್ಯ-ಕಾರ್ಯದರ್ಶಿ

2. ಸದರಿ ಅಧಿಕಾರೇತರ ಸದಸ್ಯರುಗಳು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ: 3.2.2001 ಆದೇಶದಂತೆ ಪ್ರವಾಶ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

3. ಮೇಲೆ ವಿವರಿಸಿದ ಸಮಿತಿಯ ಕಾರ್ಯವೈಖರಿಗಳ ಬಗ್ಗೆ ಅನುಬಂಧ-1 ಮತ್ತು 2 ರಲ್ಲಿ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3), ಜಲ ಸಂಪನ್ಮೂಲ ಇಲಾಖೆ.

## ANNEXURE-1

## FUNCTIONS OF THE MAJOR IRRIGATION PROJECTS CONTROL (MIPC) BOARD

1. The MIPC Board shall review the recommendations of Technical Committee in all the matters of planning, monitoring, estimates, tenders and claims in respect of Major and Medium Irrigation.

2. The Board shall have the powers to deliberate any other subject pertaining to the irrigation sector and also to direct the reference of any files to the Chairman of the Technical Committee, for advice
3. Necessary Government Orders shall be directly issued by the Water Resources Department immediately after clearance by the Board, excepting cases which have to be taken to Cabinet as per the Rules of Business.
4. In respect of cases requiring Cabinet approval, the Water Resources Department shall put up all such cases directly to the Cabinet, immediately after clearance by the Board

**A.L. JAGADISH**
Officer on Special Duty (Tech-MMI.3),
Water Resources Department.

**ANNEXURE-2**

**FUNCTIONS OF THE TECHNICAL COMMITTEE ON IRRIGATION PROJECT**

1. Planning and monitoring of all Major and Medium Irrigation Projects
2. Scrutiny of estimates of all Major and Medium Irrigation works, before according administrative approval and technical sanction.
3. Tenders and claims of contractors in respect of all Major and Medium irrigation works
4. The Technical Committee shall make suitable recommendations to the Major Irrigation Projects Control (MIPC) Board in the above matter.

**A.L. JAGADISH**
P.R. 929
Officer on Special Duty (Tech-MMI.3),
Water Resources Department.

**ಕಂದಾಯ ಸಚಿವಾಲಯ**

**ವಿಷಯ:** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ದಿನಾಂಕ:27-2-2004.
2. ಉಪ ವಿಭಾಗಾಧಿಕಾರಿಗಳು, ಬೀದರ್ ಹಾಗೂ ಆಡಳಿತಾಧಿಕಾರಿಗಳು, ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾರವರ ಪತ್ರ ಸಂಖ್ಯೆ: ಕಂ:ಸಂಕೀರ್ಣ:15:2004-05;601, ದಿನಾಂಕ:2-7-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ, ಈ ಸಂಸ್ಥೆಯ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27-ಎ ಪ್ರಕಾರ 6 ತಿಂಗಳ ಅವಧಿಗೆ ಉಪ ವಿಭಾಗಾಧಿಕಾರಿಗಳು ಬೀದರ್‌ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಆಡಳಿತಾಧಿಕಾರಿ ಅವಧಿಯು ದಿನಾಂಕ:26-8-2004ಕ್ಕೆ ಮುಕ್ತಾಯವಾಗಲಿದೆ. ಮೇಲೆ ಓದಲಾದ-(2)ರಲ್ಲಿ ಆಡಳಿತಾಧಿಕಾರಿಯವರು ವರದಿ ನೀಡಿ, ಗುಲ್ಬರ್ಗಾ ಜಿಲ್ಲೆಯು ಬೀದರ್‌ನಿಂದ ಸುಮಾರು 120 ಕಿ.ಮೀ. ದೂರದಲ್ಲಿರುವುದರಿಂದ, ಸದರಿ ಸಂಸ್ಥೆಗೆ ಹೋಗಿ ಅದರ ಕಾರ್ಯ ಕಲಾಪಗಳನ್ನು ನೋಡಿಕೊಳ್ಳಲು ಅನಾನುಕೂಲವಾಗುತ್ತಿದ್ದು, ಸದರಿ ಸಂಸ್ಥೆಯ ದಿನ ನಿತ್ಯದ ಕೆಲಸಗಳು ಹಾಗೂ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕ ವೃಂದ ಮತ್ತು ಸಿಬ್ಬಂದಿಯವರ ಮೇಲೆ ನಿಗಾ ಇಡಲು ಸ್ಥಳೀಯ ಅಧಿಕಾರಿಯವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ. ಆಡಳಿತಾಧಿಕಾರಿಯವರ ವರದಿಯನ್ನು ಪರಿಶೀಲಿಸಿ, ಉಪ ವಿಭಾಗಾಧಿಕಾರಿಗಳು, ಬೀದರ್‌ರವರ ಬದಲಿಗೆ ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾರವರನ್ನು ಮೇಲ್ಕಂಡ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನಾಗಿ ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗಲ್ಬರ್ಗಾ ಈ ಸಂಸ್ಥೆಗೆ, ಮೇಲೆ ಓದಲಾದ (1)ರ ಆದೇಶದಲ್ಲಿ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದ ಉಪ ವಿಭಾಗಾಧಿಕಾರಿಗಳು, ಬೀದರ್‌ರವರ ಬದಲಿಗೆ ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಸದರಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಆಡಳಿತವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 930
**ಎಸ್.ಜಿ. ನಾರಾಯಣ**
ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ವಿ.ಎಲ್. ದೇಶಪಾಂಡೆ ಕೆಎಎಸ್ (ಹಿರಿಯ ಶ್ರೇಣಿ) ಮತ್ತು ಶ್ರೀ ಅಶೋಕ್ ಜಿ. ಭಟ್ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಗಳು ಇವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 98, ದಿನಾಂಕ: 23.4.2003.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 98, ದಿನಾಂಕ: 3.9.2003.

3. ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ರವರ ದಿನಾಂಕ:9.6.2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

1989ನೇ ಇಸವಿ ನವೆಂಬರ್ 24 ರಂದು ನಡೆದ ಲೋಕಸಭಾ ಮತ್ತು ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ಹಳಿಯಾಳ ಮತ ಕ್ಷೇತ್ರದ ಚುನಾವಣಾ ಕಾರ್ಯದಲ್ಲಿ ಕ್ರಮವಾಗಿ ನಿರ್ವಚನಾಧಿಕಾರಿ ಮತ್ತು ಸಹಾಯಕ ನಿರ್ವಚನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ವಿ.ಎಲ್. ದೇಶಪಾಂಡೆ ಕೆಎಎಸ್, (ಹಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಅಶೋಕ್ ಜಿ.ಭಟ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಹಳಿಯಾಳ ಮತಕ್ಷೇತ್ರದ ಮತ ಎಣಿಕೆಯು ಕುಮಟಾದ ಬಾಳಿಗಾ ಕಾಲೇಜಿನಲ್ಲಿ ನಡೆದು, ಫಲಿತಾಂಶವನ್ನು ಪ್ರಕಟಿಸಿದ ನಂತರ ಚುನಾವಣೆಗೆ ಸಂಬಂಧಿಸಿದ ಮತ ಪತ್ರಗಳನ್ನು ಮೊಹರು ಮಾಡದೆ ಬಾಳಿಗಾ ಕಾಲೇಜು ಕುಮಟಾದಿಂದ ಮುಂಡಗೋಡು ತಾಲ್ಲೂಕು ಕಛೇರಿಗೆ ಕೊಂಡೊಯ್ದು ಅಲ್ಲಿ ಮತಪತ್ರಗಳನ್ನು ಬೇಜವಾಬ್ದಾರಿಯಿಂದ ಪ್ಯಾಕ್ ಮಾಡದೆ ಬಿಟ್ಟು 1951ರ ಪ್ರಜಾಪ್ರಾತಿನಿಧ್ಯ ಕಾಯ್ದೆಯ ಸೆಕ್ಷನ್ 134 ಮತ್ತು 336ನ್ನು ಉಲ್ಲಂಘಿಸಿದ್ದಕ್ಕಾಗಿ, ಶ್ರೀ ವಿ.ಎಲ್. ದೇಶಪಾಂಡೆ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಅಶೋಕ್ ಜಿ.ಭಟ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ರವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:23.4.2003ರ ನೋಟೀಸ್ ನೀಡುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಗಿತ್ತು. ಹಾಗೂ ಮೇಲೆ (2) ರಲ್ಲಿನ ದಿನಾಂಕ:3.9.2003ರ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ರವರನ್ನು ವಿಚಾರಣಾಧಿಕಾರಿಗಳನ್ನಾಗಿ ಉಪ ವಿಭಾಗಾಧಿಕಾರಿ, ಕಾರವಾರರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3) ರಲ್ಲಿ ಓದಲಾದ ಪತ್ರದ ಜೊತೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಸದರಿ ಕೃತ್ಯದಲ್ಲಿ ನಿರ್ದಿಷ್ಟವಾಗಿ ಯಾರು ಪಾಲುದಾರರು ಎಂದು ಪತ್ತೆ ಮಾಡಲು ಸಾಧ್ಯವಾಗುವುದಿಲ್ಲ ಹಾಗೂ ಅಪರಾಧ ಸಾಬೀತುಪಡಿಸಲು ಸಾಕ್ಷ್ಯಾಧಾರಗಳಿಲ್ಲವೆಂದು ಆಪಾದಿತ ಅಧಿಕಾರಿಗಳು ಜವಾಬ್ದಾರಿಯುತ ಕಂದಾಯ ಅಧಿಕಾರಿಗಳಾಗಿದ್ದು ಈ ಹಿಂದೆಯೂ ಸಹ ಅತ್ಯಂತ ಕ್ಲಿಷ್ಟ ಪರಿಸ್ಥಿತಿಯಲ್ಲಿ ಹಲವಾರು ಚುನಾವಣೆಗಳನ್ನು ನಡೆಸಿರುವ ಅನುಭವವಿದ್ದು ಇವರ ವಿರುದ್ಧ ಯಾವುದೇ ಚುನಾವಣಾ ಕರ್ತವ್ಯಲೋಪ ಅಥವಾ ದೂರುಗಳು ಇರುವುದಿಲ್ಲವೆಂದು ಅಭಿಪ್ರಾಯಪಡುತ್ತಾ ವಿಚಾರಣಾಧಿಕಾರಿಗಳು ಮೇಲ್ಕಂಡ ಅಧಿಕಾರಿಗಳ ವಿರುದ್ಧ ಹೊರಿಸಲಾದ ಆಪಾದನೆಗಳು ರುಜುವಾತಾಗಿಲ್ಲವೆಂದು ತೀರ್ಮಾನಕ್ಕೆ ಬಂದಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2004**

ಶ್ರೀಯುತ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿರಿಯ ಶ್ರೇಣಿ) ಮತ್ತು ಶ್ರೀ ಅಶೋಕ್ ಜಿ.ಭಟ್ ಕೆಎಎಸ್ (ಕಿರಿಯ ಶ್ರೇಣಿ) ಇವರುಗಳ ವಿರುದ್ಧ ಹೂಡಿದ್ದ ಇಲಾಖಾ ವಿಚಾರಣೆಯ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿಕೊಂಡು ಅವರುಗಳ ವಿರುದ್ಧ ಹೊರಿಸಲಾದ ದೋಷಾರೋಪಣೆಗಳಿಂದ ದೋಷಮುಕ್ತರನ್ನಾಗಿ ಸರ್ಕಾರವು ಆದೇಶಿಸಿದೆ.

ಆದಾಗ್ಯೂ ಚುನಾವಣೆ ಪ್ರಕ್ರಿಯೆಯು ಅತಿ ಸೂಕ್ಷ್ಮ ತೆರನಾದ ಕರ್ತವ್ಯವಾಗಿದ್ದು ಇಂತಹ ಘಟನೆಗಳು ನಡೆಯಬಾರದು ಈ ರೀತಿಯ ಕಾರ್ಯವನ್ನು ಎಚ್ಚರಿಕೆಯಿಂದ ವಹಿಸುವುದು ನಿರ್ವಚನಾಧಿಕಾರಿ/ಸಹಾಯಕ ನಿರ್ವಚನಾಧಿಕಾರಿಗಳ ಆದ್ಯ ಕರ್ತವ್ಯವಾದ್ದರಿಂದ ಅವರುಗಳಿಗೆ ಎಚ್ಚರಿಕೆ ನೀಡಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಮೇಲ್ಕಂಡ ಅಧಿಕಾರಿಗಳು ಯಾವ ಸೌಲಭ್ಯಕ್ಕೆ ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 935 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ರವರಿಗೆ ಶ್ರೀ ಹೆಚ್.ಕೆ. ಗುಂಡೂರಾವ್ ಮತ್ತು ಶ್ರೀ ವೈ. ದೇವರಾಜ್ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 71 ಎಸ್‌ಇಎನ್ 2002, ಬೆಂಗಳೂರು ದಿನಾಂಕ:19.11.2003.

2. ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರ ದಿನಾಂಕ: 28.7.2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಹೆಚ್.ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಹಾಗೂ ಶ್ರೀ ವೈ. ದೇವರಾಜು, ಹಿರಿಯ ಸಹಾಯಕರವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 19.11.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ನಿವೃತ್ತ ನ್ಯಾಯಾಧೀಶರು ಮೇಲೆ (2) ರಲ್ಲಿ ಓದಲಾದ ದಿನಾಂಕ: 28.7.2004ರ ಪತ್ರದ ಜೊತೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 77 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2004**

ಸರ್ಕಾರವು ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ವಿಚಾರಣಾ ವರದಿ ಸಲ್ಲಿಸಿದ ಕಾರಣ ಅವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.4.1998 ರನ್ವಯ ರೂ. 5000-00 (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರನ್ವಯ ರೂ. 1000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನಭತ್ಯೆಯನ್ನು ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು 090 ಸಚಿವಾಲಯ-01 ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 936

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ಶಿಕ್ಷಣ ಸಚಿವಾಲಯ**

**ವಿಷಯ:** ಚಿತ್ರಕಲಾ ಶಿಕ್ಷಕರು, ವೃತ್ತಿ ಶಿಕ್ಷಕರು, ಸಂಗೀತ, ನಾಟಕ ಮತ್ತು ನೃತ್ಯ ಶಿಕ್ಷಕರಿಗೆ 20 ವರ್ಷದ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002.
2. ನಿರ್ದೇಶಕರು, (ಪ್ರೌಢಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ4(5) 1655 ವಿಶೇಷ ಶಿಕ್ಷಣ 20 ವರ್ಷ.ಕಾ.ಬಡ್ತಿ43:2002-03 ದಿನಾಂಕ:4.2.2002, ದಿನಾಂಕ: 30.8.03 ಮತ್ತು 8.9.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ. 1ರಲ್ಲಿ ಓದಲಾದ ದಿನಾಂಕ: 9.5.2002ರ ಸರ್ಕಾರಿ ಆದೇಶದಲ್ಲಿ 20 ವರ್ಷಗಳ ಸೇವೆಯನ್ನು ಸತತವಾಗಿ ಒಂದೇ ಹುದ್ದೆಯಲ್ಲಿ ನಿರ್ವಹಿಸಿದ ಎಲ್ಲಾ ಸರ್ಕಾರಿ ನೌಕರರುಗಳಿಗೆ ಕೆಲವು ಷರತ್ತಿಗೊಳಪಟ್ಟು ಮತ್ತು ಕೆಲವು ಹುದ್ದೆಗಳನ್ನು ಹೊರತುಪಡಿಸಿ ಒಂದು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯವನ್ನು ಮಂಜೂರು ಮಾಡಲಾಗಿದೆ.

ಕ್ರಮ ಸಂಖ್ಯೆ.2ರಲ್ಲಿ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಪ್ರೌಢಶಿಕ್ಷಣ, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರೌಢಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರೌಢಶಾಲಾ ಸಹ ಶಿಕ್ಷಕರು ಮತ್ತು ಪ್ರೌಢಶಾಲಾ ದೈಹಿಕ ಶಿಕ್ಷಕರಿಗೆ 20 ವರ್ಷದ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ. ಆದರೆ ಅದೇ ಸರ್ಕಾರಿ ಪ್ರೌಢಶಾಲೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ವೃತ್ತಿ ಶಿಕ್ಷಕರು, ಚಿತ್ರಕಲಾ ಶಿಕ್ಷಕರು, ಸಂಗೀತ ಶಿಕ್ಷಕರು, ನೃತ್ಯ ಮತ್ತು ನಾಟಕ ಶಿಕ್ಷಕರಿಗೆ 20 ವರ್ಷದ ಕಾಲಮಿತಿ ಬಡ್ತಿಯನ್ನು ಮಂಜೂರು ಮಾಡಿರುವುದಿಲ್ಲ. ಆದ್ದರಿಂದ ಈ ಶಿಕ್ಷಕರಿಗೂ ಸಹ 20 ವರ್ಷದ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಬೇಕೆಂದು ಸರ್ಕಾರವನ್ನು ಕೋರಿದ್ದಾರೆ.

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 60 ಎಸ್‌ಆರ್‌ಪಿ 84, ದಿನಾಂಕ: 23.8.84ರಲ್ಲಿ 10 ವರ್ಷ ಸೇವೆ ಸಲ್ಲಿಸಿದ ಎಲ್ಲಾ ಸರ್ಕಾರಿ ನೌಕರರಿಗೆ ಕಾಲಮಿತಿ ವೇತನ ಬಡ್ತಿ ನೀಡುವಂತೆ ಆದೇಶಿಸಲಾಗಿದೆ. ಸದರಿ ಆದೇಶದ ಪ್ರಕಾರ ವಿಶೇಷ ಶಿಕ್ಷಕರಿಗೂ ಸಹ ಕಾಲಮಿತಿ ವೇತನ ಬಡ್ತಿಯನ್ನು ನೀಡಲಾಗಿದೆ. ಇದೇ ರೀತಿ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸತತ ಸೇವೆ ಸಲ್ಲಿಸಿದ ನೌಕರರಿಗೂ ಸ್ವಯಂಚಾಲಿತ ಮುಂಬಡ್ತಿಯನ್ನು ನೀಡುವಂತೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ: 1.2.93ರಲ್ಲಿ ಆದೇಶವಾಗಿರುತ್ತದೆ. ಈ ಆದೇಶದ ಪ್ರಕಾರ 10 ಮತ್ತು 15 ವರ್ಷ ಸೇವೆ ಸಲ್ಲಿಸಿದ ವಿಶೇಷ ಶಿಕ್ಷಕರಿಗೆ ಕಾಲಮಿತಿ ಮತ್ತು ಸ್ವಯಂಚಾಲಿತ ಮುಂಬಡ್ತಿಗಳನ್ನು ನೀಡಲಾಗಿದೆ.

ಕ್ರಮ ಸಂಖ್ಯೆ.1ರಲ್ಲಿರುವ ಸರ್ಕಾರಿ ಆದೇಶದಲ್ಲಿ ಸತತವಾಗಿ ಒಂದೇ ಹುದ್ದೆಯಲ್ಲಿ 20 ವರ್ಷ ಸೇವೆ ಸಲ್ಲಿಸಿದ ಸರ್ಕಾರಿ ನೌಕರರಿಗೆ ಒಂದು ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡಲು ಆದೇಶಿಸಿದೆ. ಆದರೆ ಸದರಿ ಆದೇಶದಲ್ಲಿ ಶಿಕ್ಷಕರನ್ನು ಹೊರತುಪಡಿಸಿ ಎಂದು ತಿಳಿಸಿದೆ. ಪ್ರಾಥಮಿಕ ಶಾಲಾ ಶಿಕ್ಷಕರು ಮತ್ತು ಪ್ರೌಢಶಾಲಾ ಸಹ ಶಿಕ್ಷಕರುಗಳಿಗೆ ಬೇರೆ ಬೇರೆ ಆದೇಶಗಳಲ್ಲಿ ಈ ಸೌಲಭ್ಯವನ್ನು ನೀಡಲಾಗಿದೆ. ವಿಶೇಷ ಶಿಕ್ಷಕರು ಅಂದರೆ, ಚಿತ್ರಕಲಾ, ವೃತ್ತಿ, ಸಂಗೀತ, ನಾಟಕ ಮತ್ತು ನೃತ್ಯ ಶಿಕ್ಷಕರುಗಳು 20 ವರ್ಷ ಸೇವೆ ಸಲ್ಲಿಸಿದ್ದರೂ ಸಹ ಸದರಿ ಕಾಲಮಿತಿ ವೇತನ ಬಡ್ತಿಯನ್ನು ಪಡೆಯದೇ ವಂಚಿತರಾಗಿರುತ್ತಾರೆ. ಆದ್ದರಿಂದ 20 ವರ್ಷ ಸೇವೆ ಸಲ್ಲಿಸಿದ ಸರ್ಕಾರಿ ಪ್ರೌಢಶಾಲೆಯ ಎಲ್ಲಾ ವಿಶೇಷ ಶಿಕ್ಷಕರಿಗಳಿಗೂ ಈ ಸೌಲಭ್ಯ ವಿಸ್ತರಿಸಲು ಕೋರುತ್ತಿರುವ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 195 ಎಸ್‌ಎಲ್‌ಬಿ 2002, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002ರಲ್ಲಿ ಕೆಲವು ಷರತ್ತಿಗೊಳಪಟ್ಟು ಮಂಜೂರು ಮಾಡಲಾದ ಒಂದು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯವನ್ನು ಸರ್ಕಾರಿ ಪ್ರೌಢಶಾಲೆಗಳಲ್ಲಿ ಒಂದೇ ಹುದ್ದೆಯಲ್ಲಿ 20 ವರ್ಷಗಳ ಸತತ ಸೇವೆಯನ್ನು ಸಲ್ಲಿಸಿದ ವೃತ್ತಿ ಶಿಕ್ಷಕರು, ಚಿತ್ರಕಲಾ ಶಿಕ್ಷಕರು, ಸಂಗೀತ ಶಿಕ್ಷಕರು, ನಾಟಕ ಮತ್ತು ನೃತ್ಯ ಶಿಕ್ಷಕರುಗಳಿಗೆ ಸದರಿ ಆದೇಶದಲ್ಲಿ ನಮೂದಿಸಿರುವ ಷರತ್ತಿಗೊಳಪಡಿಸಿ ದಿನಾಂಕ: 1.4.2002 ರಿಂದ ವಿಸ್ತರಿಸಲು ಸರ್ಕಾರವು ಆದೇಶಿಸಿದೆ.

